



Photo by B. Ranganadham

ದೀಪಾವಳಿ

# ಈ ಸಂಚಿಕೆಯಲ್ಲಿ



ಇವಲ್ಲದೆ 'ದೋಸೆಯ ಆಸೆ' ಚುಟಕ, ಸ್ಪರ್ಧೆ, ಒಗಟು ಇತ್ಯಾದಿಗಳನೇಕ.

#  ಅವಶ್ಯ ಓದಿರಿ!! 

ಚಂದಾದಾರರಿಗೆ ಸೂಚನೆಗಳು.

★ ಚಂದಮಾಮಾ ಮಾಸಪತ್ರಿಕೆಯು ಪ್ರತಿ ತಿಂಗಳ ಮೊದಲನೆಯದಿನ ಪ್ರಕಟವಾಗುವುದು. ಒಡನೆಯೇ ಚಂದಾದಾರರಿಗೆ ಪೋಸ್ಟು ಮುಖಾಂತರ ಕಳಿಸಲಾಗುವುದು. ಯಾರಿಗಾದರೂ ಪ್ರತಿಯು ಸಕಾಲದಲ್ಲಿ, ಹೆಚ್ಚೆಂದರೆ 6 ನೇ ತಾರೀಖಿನೊಳಗೆ ತಲಪದಿದ್ದಲ್ಲಿ ಕೂಡಲೇ ಸಂಬಂಧಪಟ್ಟ ಸ್ಥಳೀಯ ಪೋಸ್ಟ್ ಆಫೀಸಿನಲ್ಲಿ ವಿಚಾರಿಸಿ ಆಮೇಲೆ ನಮಗೆ ತಡಮಾಡದೆ ತಿಳಿಸಬೇಕು.

★ ಅಂತಹ ದೂರು ನಮ್ಮ ಕೈಗೆ ಆಯಾತಿಂಗಳ 10 ನೇ ತಾರೀಖಿನೊಳಗೆ ತಲಪಬೇಕು. ತಡವಾಗಿ ಬಂದ ಪತ್ರಗಳನ್ನು ಗಮನಿಸಲಾಗುವುದಿಲ್ಲ.

★ ಚಂದಾದಾರರು ಬರೆಯುವ ಯಾವ ಪತ್ರದಲ್ಲೇ ಆಗಲೀ ತಮ್ಮ ಚಂದಾ ಸಂಖ್ಯೆಯನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಇದು ಬಹಳ ಮುಖ್ಯ. ತಮ್ಮ ಸಂಖ್ಯೆ ಬರೆಯದ ಚಂದಾದಾರರ ಪತ್ರಗಳನ್ನು ಗಮನಿಸುವುದು ಸಾಧ್ಯವಿಲ್ಲ.

★ ಮೇಲಿನ ಸೂಚನೆಗಳನ್ನು ನೆನಪಿಟ್ಟು ಚಂದಾದಾರರು ಸಹಕರಿಸಿದರೆ ಯಾವುದಕ್ಕೂ ವ್ಯವಹರಿಸಲು ಸುಲಭವಾಗುವುದು.

ಲೇಖಕರಿಗೆ ಸೂಚನೆಗಳು.

★ ಉದ್ದವಾದ ಲೇಖನಗಳಿಗೆ ಸ್ಥಳವಿಲ್ಲ.

★ ಲೇಖನಗಳನ್ನು ಸರಳವಾಗಿ ಸ್ವಾರಸ್ಯವಾಗಿ ಸ್ಪಷ್ಟವಾಗಿ ಬರೆದಿರಬೇಕು.

★ ಲೇಖನಗಳನ್ನು ಬೇರೆ ಪುಸ್ತಕಗಳಿಂದ ತೆಗೆದು ಕಳಿಸಬಾರದು.

★ ಉತ್ತರ ಬಯಸುವವರು ಸಾಕಷ್ಟು ಅಂಚೆ ಚೀಟಿ (ಸ್ಟಾಂಪು) ಗಳನ್ನು ಲೇಖನದೊಂದಿಗೆ ಕಳಿಸಬೇಕು. ಸ್ಟಾಂಪು ಇಡದ ಪತ್ರಗಳನ್ನು ಉತ್ತರಿಸಲಾಗುವುದಿಲ್ಲ.

★ ನಿಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆದು ಕಳಿಸಬೇಕು.

★ ನಮ್ಮ ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆದು ಹಾಕಬೇಕು. ಇಲ್ಲದಿದ್ದರೆ ನಿಮ್ಮ ಕಾಗದವು D. L. O. ಎಂದರೆ 'ಸತ್ತಕಾಗದ ಕಛೇರಿ'ಗೆ ಹೋಗುವುದು.

★ ಉತ್ತರಕ್ಕೆ ಅಂಚೆ ಚೀಟು ಇಟ್ಟೂ ನಮ್ಮಿಂದ ತಿಂಗಳೊಳಗೆ ಉತ್ತರ ಬಾರದಿದ್ದರೆ ಕಾಗಧವು ಕಾರಣಾಂತರದಿಂದ ನಮಗೆ ತಲಪಿಲ್ಲವೆಂದು ತಿಳಿಯಬೇಕು.

★ ಲೇಖನಗಳ ವಿಚಾರವಾಗಿ ಆಮೇಲೆ ಪತ್ರಗಳನ್ನು ವೃಥಾ ಬರೆಯಬಾರದು.

ಸಂಪಾದಕ:

ಎಂ. ಟಿ. ವಿ. ಆಚಾರ್ಯ

# ಮುಖಚಿತ್ರ

ಕಳೆದ ಸಲ ಕತ್ತೆಯ ರೂಪದಲ್ಲಿದ್ದ ಧೇನುಕಾಸುರನ ವಿಚಾರ ತಿಳಿಸಿದೆನಷ್ಟೆ. ಧೇನುಕಾಸುರ ಮತ್ತು ಆತನ ಬಂಧುವರ್ಗವನ್ನೆಲ್ಲಾ ತೀರಿಸಿದಮೇಲೂ ಇನ್ನೂ ಅನೇಕ ರಾಕ್ಷಸರು ಉಳಿದಿದ್ದರು. ಅವರಿಗೆಲ್ಲಾ ಶಾಂತಿಯುಳ್ಳ ಪ್ರಜೆಗಳನ್ನು ಪೀಡಿಸುವುದೆಂದರೇ ಉತ್ಸಾಹ. ಅಂತೆಯೇ ಬೃಂದಾವನದ ಗೋಪರನ್ನು ಪೀಡಿಸಿ ಕೃಷ್ಣಬಲರಾಮರನ್ನು ಕೊಲ್ಲಲು ತಮ್ಮ ತಮ್ಮ ಸರದಿಗಾಗಿ ಕಾಯುತ್ತಿದ್ದರು.

ಧೇನುಕನು ಸತ್ತ ಕೆಲದಿನಗಳಲ್ಲೇ ಅಘಾಸುರನೆಂಬುವನು ಬಂದು ಕೃಷ್ಣನ ಕೈಯಿಂದ ಹತನಾದನು. ಅಘಾಸುರನಿಗೆ ಮಾವನಾದ ಅರಿಷ್ಟಾಸುರನು ಇದರಿಂದ ಕೋಪಗೊಂಡನು. 'ಛಿ! ಬುದ್ಧಿಯಿಲ್ಲದ ಮೂಢರು' ಎಂದು ತನ್ನ ರಾಕ್ಷಸ ಪಂಗಡದವರನ್ನು ಹೀಯಾಳಿಸಿದನು. 'ಈ ಕೃಷ್ಣನೆಂಬ ಮೂರು ಮೆಣಸಿನ ಕಾಯುದ್ದ ನರಬಾಲಕನಿಂದ ಹತರಾದ ರಾಕ್ಷಸರನ್ನು ಏನೆನ್ನಬೇಕು? ದಡ್ಡರಲ್ಲವೆ! ಶಕ್ತಿಯಲ್ಲಿ ಕೃಷ್ಣನಿಗೂ ಅವರಿಗೂ ಎಲ್ಲಿಯ ಸಾಟಿ?' ಎಂದು ಮರುಕಪಟ್ಟನು. ತನ್ನ ಪ್ರಿಯಬಂಧುವನ್ನು ಕೊಂದ ಕೃಷ್ಣನಿಗೆ ಪ್ರಾಯಶ್ಚಿತ್ತಮಾಡದೇ ಬಿಡುವುದಿಲ್ಲ ಎಂದು ನಿಶ್ಚಯಿಸಿದನು. ಕೂಡಲೇ ಕಂಸನ ಅಪ್ಪಣೆ ಪಡೆದು ಹೊರಟನು.

ಭಯಂಕರ ಮದವೇರಿದ ಗೂಳಿಯ ಆಕಾರದಿಂದ ಗುಡುಗುತ್ತಾ ಭೂಮಿಯನ್ನು ನಡುಗಿಸುತ್ತಾ ವಾಯುವೇಗದಿಂದ ನುಗ್ಗುತ್ತಾ ಆ ವನದಲ್ಲಿ ಬಂದು ಕೃಷ್ಣನಿದ್ದೆಡೆಗೆ ಓಡಿದನು. ಎಲ್ಲರನ್ನು ತಬ್ಬಿಬ್ಬಾಗಿಸಿ ಕೃಷ್ಣನನ್ನು ಒಂದೇ ಏಟಿಗೆ ತಿವಿದು ಆಕಾಶಕ್ಕೆ ಒಗೆಯಬೇಕೆಂದು ಅವನ ಆಸೆ. ಅಕಸ್ಮಾತ್ತಾಗಿ ಬಂದ ಈ ವಿಪತ್ತನ್ನು ನೋಡಿ ಗೋಪಬಾಲರು ತಲ್ಲಣಿಸಿದರು ಎಲ್ಲಿದ್ದರೆ ಅಲ್ಲೇ ಅಡಗಿದರು. ಕೆಲವರು ಪ್ರಾಣ ಉಳಿಸಿಕೊಳ್ಳಲು ಓಡಿದರು. ಕೆಲವರು ಮರಗಳನ್ನೇರಿ ಬದುಕಿದರು. ಬಾಲೆಯರು ಕೃಷ್ಣನಲ್ಲಿ ಮೊರೆಯಿಟ್ಟರು. ದನಕರುಗಳಂತೂ ಚಲ್ಲಾಪಿಲ್ಲಿಯಾಗಿ ಓಡಿದುವು. ಓಡಲಾರದ ಎಳೆಯಕರುಗಳು ಗೂಳಿಯ ರಭಸಕ್ಕೆ ಸಿಕ್ಕಿ ಉರುಳಿದುವು.

ಇಷ್ಟೆಲ್ಲಾ ಅನಾಹುತಕ್ಕೆ ಕಾರಣವಾದ ಗೂಳಿಯನ್ನು ಕೃಷ್ಣನು ಕಂಡನು. ಅರಿಷ್ಟಾಸುರನೆಂದು ಅರಿತನು. ಜಗತ್ತನ್ನೇ ಆಳುವ ಪರಮಾತ್ಮನಿಗೆ ಯಾವುದು ತಾನೇ ದೊಡ್ಡ ಕೆಲಸ! ಪರಮಾತ್ಮನ ಅವತಾರವಾದ ಕೃಷ್ಣನಿಗೆ ಗೂಳಿಯೂ ಹುಳುವಿನಂತೆಯೇ! ಕೃಷ್ಣನು ತನ್ನ ಮೇಲೆ ನುಗ್ಗಿದ ಗೂಳಿಯ ಗುರಿಯನ್ನು ತಪ್ಪಿಸಿ ಅದರ ಕೊಂಬುಗಳನ್ನು ಬಲವಾಗಿ ಹಿಡಿದನು. ಅದರ ಎಡಕೊಂಬನ್ನು ಕಡ್ಡಿ ಮುರಿಯುವಂತೆ ಮುರಿದು ಅದೇ ಆಯುಧವನ್ನಾಗಿ ಹಿಡಿದು ಮರ್ಮಸ್ಥಳಗಳಿಗೆ ಪ್ರಾಣಾಂತಕವಾಗಿ ಚುಚ್ಚತೊಡಗಿದನು. ಆದರೆ ಗೂಳಿಗೆ ಮಾತ್ರ ಏನು ಮಾಡಿದರೂ ಸಿಕ್ಕವೊಲ್ಲನು. ಅರಿಷ್ಟಾಸುರನಿಗೆ ಈಗ ಕೃಷ್ಣನ ಬಲುಮೆ ಅರಿವಾಯಿತು. ಆದರೇನು? ಕೃಷ್ಣನ ಕೈಗೆ ಸಿಕ್ಕಿಕೊಂಡಮೇಲೆ ಪ್ರಾಣ ಉಳಿಯುವ ಆಸೆ ತೀರಿತು. ಅಸುರನ ರಭಸ ಕುಗ್ಗಿತು. ರಕ್ತಕೋಡಿ ಹರಿಯಿತು. ಶಕ್ತಿ ಹೋಯಿತು. ಕಡೆಗೆ ಬಾಧೆ ತಾಳಲಾರದೆ ಕೊಂಚ ಹೊತ್ತಿನಲ್ಲೇ ಬಿದ್ದು ಒದ್ದಾಡಿ ಪ್ರಾಣಬಿಟ್ಟನು.

ಈ ರೀತಿ ಮತ್ತೊಬ್ಬ ಅಸುರನ ನಾಶವಾಯಿತು.




ಸಂಪುಟ ೩ | ನವೆಂಬರ್ ೧೯೪೯ | ಸಂಚಿಕೆ ೫

# ಇರುವೆ

ಮಕ್ಕಳು : ಇರುವೇ, ಇರುವೇ, ಇದ್ದೇ ಇರುವೆ !
ಇರುವೆ : ಬರುವೇ, ಬರುವೇ, ,ಬಂದೇ ಬರುವೆ !
ಮಕ್ಕಳು : ಎಲ್ಲಾ ಕಡೆಯೂ ನೀನೇ ಇರುವೆ !
ಇರುವೆ : ಎಲ್ಲಿಗೆ ಹೋದರೂ ನಾನೂ ಬರುವೆ !
ಮಕ್ಕಳು : ಅಡಿಗೆ ಮನೆಯುಲಿ ನೀ ತುಂಬಿರುವೆ !
ಇರುವೆ : ಊಟದ ತಟ್ಟೆಗೂ ನಾ ಬರುವೆ !
ಮಕ್ಕಳು : ಸಕ್ಕರೆ ಡಬ್ಬಿಕೆ ನೀ ಮುತ್ತಿರುವೆ !
ಇರುವೆ : ಬೆಲ್ಲದ ಅಚ್ಚಿನ ಮೇಲೂ ಇರುವೆ !
ಮಕ್ಕಳು : ಶಾಲೆಗೂ ಬರುವೆಯ ನೀ ಮರಿ ಇರುವೆ ?
ಇರುವೆ : ಹಾಲನು ಇಟ್ಟರೆ ನಾನೇ ಬರುವೆ !
ಮಕ್ಕಳು : ತಿಂಡಿ ಕೊಡುವೆನು ಬರುವೆಯ ಇರುವೆ?
ಇರುವೆ : ಸಿಹಿಯೆಂದರೆ ಸರಿ ಕುಣಿಯುತ ಬರುವೆ !

T. V. ನಾಗೇಂದ್ರ ಗುಪ್ತ

## ಗುಬ್ಬಿಯ ಮದುವೆ



ಹೂಬಿಸಿಲಲಿ ಮಳೆ ಬರುತಿತ್ತು ।
ಗುಬ್ಬಿಯ ಲಗ್ನವು ನಡೆದಿತ್ತು ॥ ಪ ॥

ಪಕ್ಷಿಗಳೆಲ್ಲವು ಕೂಡಿದವು ।
ರೆಕ್ಕೆಗಳನ್ನು ನೆನೆಸಿದವು ॥

ಗುಬ್ಬಿಗೆ ಅರಿಷಿಣ ಹಚ್ಚಿದವು ।
ಮದುಮಗನನ್ನು ಮಾಡಿದವು ॥

ಚಿಟಗುಬ್ಬಿಯನು ಕರೆಸಿದವು ।
ಮದುಮಗಳನ್ನು ಮಾಡಿದವು ॥

ಕೋಗಿಲೆಯನ್ನು ಕರೆಸಿದವು ।
ಹಾಡನು ಹೇಳಲು ಹಚ್ಚಿದವು ॥

ಹದ್ದುಗಳನ್ನು ಕರೆಸಿದವು ।
ಸನಾದಿ ಊದಲು ಹಚ್ಚಿದವು ॥

ನವಿಲುಗಳನ್ನು ಕರೆಸಿದವು ।
ಕುಣಿತವ ಮಾಡಲು ಹಚ್ಚಿದವು ॥

ಪಕ್ಷಿಗಳೆಲ್ಲವು ಕೂಡಿದವು ।
ಗುಬ್ಬಿಯ ಮದುವೆಯ ಮಾಡಿದವು ॥

ಹೂಬಿಸಿಲಲಿ ಮಳೆ ಬರುತಿತ್ತು ।
ಗುಬ್ಬಿಯ ಲಗ್ನವು ನಡೆದಿತ್ತು ॥

ವಸಂತರಾಜ ಅಂಗಡಿ

## ಸಣ್ಣವರ ಸರ್ವಜ್ಞಪದಗಳು

ಮಕ್ಕಳಿಗೆ ಅಕ್ಕರೆಯು
ಚಿಕ್ಕ ಚೆಲು ಕತೆಯಲ್ಲಿ
ಸಕ್ಕರೆಯ ಸವಿದಂತಿಹುದು ಕೇಳು ಸರ್ವಜ್ಞ!

ಹಕ್ಕಿಯಿಂಚರ ಇಂಪು
ಮಕ್ಕಳಾ ನುಡಿ ಸೊಂಪು
ಅಕ್ಕರೆಯಮಾತು ಮನಕೊಳ್ಳೆತಂಪು ಸರ್ವಜ್ಞ

ಮಂಗನಿಗೆ ಬಾಲವಿದೆ
ರಂಗ ಕಟ್ಟಿಕೊಂಡರು ಬಾಲ
ಮಂಗ ತಾನಾಗಲಾರನೆಂದೆಂದೂ ಸರ್ವಜ್ಞ!

ಪುಟ್ಟನಾ ರೊಟ್ಟಿಯನು
ಕಿಟ್ಟ ತಿಂದರೆ ಕದ್ದು
ಕುಟ್ಟಲೇ ಬೇಕವನ ತಲೆಗೆ ಪುಟ್ಟ ಸರ್ವಜ್ಞ!

## ಕಂದನ ಕವನ

ಬಿಟ್ಟ ಪದಗಳನ್ನು ತುಂಬಿ ಪದ್ಯವನ್ನಾಗಿ ಮಾಡಿ.

೧. ಅಕ್ಕನಿಗುದ್ದದ ಜಡೆ
ಹಾವಿಗುಂಟು — .

೨. ಮನುಜಗೆ ಮುಖ್ಯ ತಲೆ
ಜೇಡನಿಗೆ ಉಂಟು — .

೩. ಕಬ್ಬು ತಿನ್ನಲು ಸಿಹಿ
ಔಷಧ ಕುಡಿಯಲು — .

೪. ಮಗುವಿಗೆ ಉಣಿಸಲು ತಾಯಿ
ಮನೆಯನು ಕಾಯಲು — .

೫. ಪೈರು ಬೆಳೆದರೆ ತೆನೆ
ವಾಸಕೆ ನಮಗೆ — .

೬. ಅಜ್ಜ ಕೊಟ್ಟ ತುತ್ತೂರಿ
ನನ್ನ ಹೆಸರು — .

ಬಿ. ಕಸ್ತೂರಿಬಾಯಿ

# ★ ಎರಡು ಬೆಕ್ಕಿನ ಮರಿಗಳು ★

ಎರಡು ಬೆಕ್ಕಿನ ಮರಿಗಳಟ್ಟಕೆ
ರಾತ್ರಿಯಾಗಲು ನಡೆದುವು
ಸದ್ದು ಮಾಡದೆ ಬಿಲದ ಬಳಿಯಲಿ
ಇಲಿಯ ಹೊಂಚುತ ಕುಳಿತವು.

ಬೆಕ್ಕಿನಿರವನು ತಿಳಿಯದಿಲಿಯು
ಓಡಿ ಹೊರಗಡೆ ಬಂದಿತು
ಒಂದು ಬೆಕ್ಕಿನ ಮರಿಯು ಫಕ್ಕನೆ
ಹಾರಿ ಇಲಿಯನು ಕೊಂದಿತು.

ಕೊಂದ ಇಲಿಯನು ಹಂಚಿಕೊಳ್ಳಲು
ತಿಳಿಯಲಾರದೆ ಕಾದುತ,
ಒಂದು ಮತ್ತೊಂದನ್ನು ಹೊಡೆಯುತ
ಪರಚಿ, ಕಿರಿಚುತ, ಕೂಗುತ,

ಮರಿಗಳೆರಡೂ ಅಟ್ಟದಿಂದಲಿ
ಅಡಿಗೆ ಮನೆಯಲಿ ಬಿದ್ದುವು
ಅಲ್ಲಿಯೂ ಅವು ಸುಮ್ಮನಾಗದೆ
ಹಾಲಪಾತ್ರೆಯ ಕೆಡೆದುವು.

ಮನೆಯ ಒಡತಿಯೀ ಪೀಕಲಾಟವ
ಕಂಡು ರೋಷದಿ, ಮರಿಗಳ
ಹೊರಗೆ ದೂಡುತ ಅಗಳಿಯಿಕ್ಕಿದ
ಳಾಕೆ ಕೋಣೆಯ ಬಾಗಿಲ.

ಕಷ್ಟದಿಂದಲಿ ಕೊಂದ ಇಲಿಮರಿ
ಅಟ್ಟದಲ್ಲಿಯೆ ಉಳಿಯಿತು.
ಜಗಳವಾಡಿದ ಮರಿಗಳೆರಡಕೆ
ಅಂಗಳವೆ ಗತಿಯಾಯಿತು.

ಮಿಂಚು ಮಿಂಚಿತು,
ಗುಡುಗು ಗುಡುಗಿತು
ಮಳೆಯು ಬಿಡದೇ ಸುರಿಯಿತು
ಸಿಡಿಲು ಬಡಿಯಿತು,
ಮರವು ಉರುಳಿತು
ಮಳೆಯ ಭರ ಮಿತಿ ಮೀರಿತು.

ರಾತ್ರಿಯಿಡಿ ಚಳಿ ತಾಳಲಾರದೆ
ಮರಿಗಳೆರಡೂ ನೊಂದವು
ಜಗಳವಾಡಿದ ತಪ್ಪಿಗುತ್ತಮ
ಶಿಕ್ಷೆಯನ್ನವು ಕಂಡವು.

ಮಾರನೆ ದಿನ ಮನೆಯ ಒಡತಿಯು
ಬಾಗಿಲನು ತೆಗೆದೊಡನೆಯೇ
ಮರಿಗಳೆರಡೂ ಓಡಿ ಒಲೆಯಾ
ಬಳಿಯೆ ಬೆಚ್ಚಗೆ ಕುಳಿತುವು.

ಚಿಕ್ಕಮಕ್ಕಳೆ ಚಿಕ್ಕ ವಿಷಯಕೆ
ಜಗಳವಾಡಲೆ ಬೇಡಿರಿ
ಜಗಳವಾಡಲು ಬೆಕ್ಕುಮರಿಗಳ
ಗತಿಯೆ ನಿಮಗೂ ; ನೋಡಿರಿ.




ಒಂದಾನೊಂದು ಕಾಲದಲ್ಲಿ ಒಬ್ಬ ರಾಜ ನಿದ್ದನು. ಆತನಿಗೆ ರಮಣೀಯವಾದ ಒಂದು ಕೋಟೆ. ಆ ಕೋಟೆಯ ಸಮೀಪದಲ್ಲಿ ಒಂದು ಗೊಂಡಾರಣ್ಯ. ಆ ಅರಣ್ಯಕ್ಕೆ ಯಾರೂ ಹೋಗುತ್ತಿರಲಿಲ್ಲ. ಆದರೆ ಅದರಲ್ಲಿ ಎಂಟು ಜನ ವನಕನ್ಯೆಯರು ವಾಸಿಸುತ್ತಿದ್ದರು. ಅವರಲ್ಲಿ ಏಳು ಜನ ಸಜ್ಜನರು; ರಾಜನಿಗೆ ಶ್ರೇಯಸ್ಸು ಕೋರುವವರು. ಎಂಟನೆಯವಳು ದುಷ್ಟಳು. ಅಪಕಾರಿಣಿ.

ಆ ಏಳುಜನ ಚಿಕ್ಕಚೊಕ್ಕವಾದ ಪರ್ಣ ಶಾಲೆಗಳಲ್ಲಿ ವಾಸಿಸುತ್ತಿದ್ದರು. ದುಷ್ಟಕನ್ಯೆ, ಯಾರ ಕಣ್ಣಿಗೊ ಕಾಣಿಸದಂತೆ ಒಂದು ಮೂಲೆ ಕತ್ತಲು ಕೋಣೆಯಲ್ಲಿ ಕಾಲಹರಣ ಮಾಡುತ್ತಾ ಇದ್ದಳು.

ಹೀಗೆ ಇರುವಲ್ಲಿ ರಾಜನಿಗೆ ಒಬ್ಬ ಮಗಳು ಹುಟ್ಟಿದಳು. ಆ ಶಿಶುವು ಅಪೂರ್ವ ಕಾಂತಿಯಿಂದ ಬೆಳಗುತಿತ್ತು. ಅದರಿಂದ ಆಕೆಗೆ 'ಕಾಂತಿಬಾಲೆ' ಎಂದು ನಾಮಕರಣ ಮಾಡಿದರು.

ಕಾಂತಿಬಾಲೆ ಹುಟ್ಟಿದ ವಿಷಯ ತಿಳಿದು ಆ ಊರಿನ ಜನರೆಲ್ಲರೂ ನೋಡಲು ಬಂದರು. ಹಾಗೆ ವನಕನ್ಯೆಯರು ಎಂಟು ಮಂದಿಯೂ ಬಂದರು. ಏಳುಮಂದಿ ಯೋಗ್ಯಕನ್ಯೆಯರು ಕಾಂತಿಬಾಲೆಗೆ ಒಳ್ಳೆಯ ಕಾಣಿಕೆಗಳನ್ನಿತ್ತು ಸುಖವಾಗಿರುವಂತೆ ಆಶೀರ್ವಾದಮಾಡಿದರು. ಆದರೆ ದುಷ್ಟಕನ್ಯೆ ಏನು ಮಾಡಿದಳು ಗೊತ್ತೆ? "ಹಗಲು ಹೊತ್ತೆಲ್ಲಾ ನಿದ್ದೆಯ ಮತ್ತಿನಲ್ಲೇ ಇರು" ಎಂದು ಶಾಪವಿತ್ತಳು ಕಾಂತಿಬಾಲೆಗೆ.

ಈ ಶಾಪ ಕೇಳಿ ರಾಜ ಮತ್ತು ರಾಣಿ ದುಃಖಸಾಗರದಲ್ಲಿ ಮುಳುಗಿದರು. ಕೋಟೆಯ ಪ್ರಜೆಗಳೆಲ್ಲಾ ಯೋಚನೆಯಲ್ಲಿ ಮುಳುಗಿದರು.

ಆ ಸಮಯದಲ್ಲಿ ಆರನೇ ಕನ್ಯೆ ಬಂದು 'ಕಾಂತಿಬಾಲೆ ರಾತ್ರಿ ಹೊತ್ತೆಲ್ಲಾ ಎಚ್ಚರವಾಗಿರ ಬೇಕು' ಎಂದು ವರ ಕೊಟ್ಟಳು.

'ನೀನು ಏಕೆ ಮಧ್ಯೆ ಬಾಯಿ ಹಾಕಿದೆ!' ಎಂದು ಕೋಪಗೊಂಡು ದುಷ್ಟಕನ್ಯೆ 'ಸರಿ.



ಕಾಂತಿಬಾಲೆ ರಾತ್ರಿ ಹೊತ್ತು ಎಚ್ಚರವಾಗಿಯೇ ಇರಲಿ. ಆದರೆ ಚಂದ್ರನಂತೆ ಆಕೆಯ ಕಾಂತಿ ಹುಣ್ಣಿಮೆಯ ದಿನ ಪೂರ್ಣಗೊಂಡು ಅಮಾವಾಸ್ಯೆಯಂದು ನಾಶವಾಗಬೇಕು' ಎಂದು ಮತ್ತೆ ಶಾಪವಿತ್ತಳು.

ಏಳನೇ ಕನ್ಯೆ ಪುನಃ 'ತನಗೆ ತಿಳಿಯದ ರಾಜಕುಮಾರನು ಬಂದು ಕಾಂತಿಬಾಲೆಯನ್ನು ಮುಟ್ಟಿದಕೂಡಲೇ ಆಕೆಗೆ ಶಾಪ ವಿಮುಕ್ತಿಯಾಗಬೇಕು' ಎಂದು ಹರಸಿದಳು.

ಇನ್ನು ಏನು ಮಾಡಲೂ ತೋರದೆ ಹೇಗಾದರೂ ಕಾಂತಿಬಾಲೆಯನ್ನು ಕಷ್ಟಕ್ಕೆ ಗುರಿಮಾಡಿ ಅಕ್ಕಂದಿರಮೇಲೆ ಮುಯ್ಯಿ ತೀರಿಸಿಕೊಳ್ಳಲು ದುಷ್ಟಕನ್ಯೆ ಕಾದುಕೊಂಡಿದ್ದಳು.

ಪಾಪ, ಕಾಂತಿಬಾಲೆ ಹಗಲು ಹೊತ್ತಿನಲ್ಲಿ ನಿದ್ದೆ ಮಾಡುವಳು. ಕಣ್ಣು ತೆರೆಯುತ್ತಿರಲಿಲ್ಲ. ಕೃಷ್ಣಪಕ್ಷಪಾಡ್ಯಮಿಯಿಂದ ದಿನದಿನಕ್ಕೆ ಆಕೆಯ ಮುಖ ಬಾಡಿ ಬತ್ತಿ ಶರೀರವು ತೆಳ್ಳಗಾಗಿ ಅಮಾವಾಸ್ಯೆಯಂದು ರೋಗಿಯಂತೆ ಕದಲಾಡದೆ ಮಲಗುವಳು. ಶುಕ್ಲಪಕ್ಷ ಪ್ರಾರಂಭವಾದಕೂಡಲೇ ದಿನದಿನಕ್ಕೆ ಆಕೆ ಅಂದಚೆಂದಗಳಿಂದ ಬೆಳಗುತ್ತಾ ಹುಣ್ಣಿಮೆಯ ದಿನ ಉಜ್ವಲವಾದ ಕಾಂತಿಯಿಂದ ಪ್ರಕಾಶಿಸುವಳು.

ತಾನು ಶಾಪಗ್ರಸ್ತಳಾಗಿರುವ ಸಮಾಚಾರ ಆ ಶಾಪದಿಂದ ತನಗೆ ವಿಕೃತರೂಪ ಬರುವ ವಿಷಯ ಎಲ್ಲರಿಗೂ ಎಲ್ಲಿ ತಿಳಿದುಬಿಡುವುದೋ ಎಂಬ ಭಯ ಕಾಂತಿಬಾಲೆಗೆ. ಆದ್ದರಿಂದ ಆಕೆ ಒಬ್ಬೊಂಟಿಗಳಾಗಿ ಅರಣ್ಯದಲ್ಲಿ ಸಂಚರಿಸುವುದು ಅಭ್ಯಾಸಮಾಡಿಕೊಂಡಳು. ರಾಜನು ಇದನ್ನು ಕಂಡು ಹಿಡಿದು, ಅಡವಿಯಲ್ಲಿ ಆಕೆಗೆ ನೆಚ್ಚಿನ ಏಕಾಂತಸ್ಥಳದಲ್ಲಿ ಒಂದು ಸುಂದರವಾದ ಲತಾಮಂಟಪವನ್ನು ಕಟ್ಟಿಸಿಕೊಟ್ಟನು. ಅದರಲ್ಲಿ ಆಕೆ ತನ್ನ ಸಖಿಯರೊಂದಿಗೆ ಸಂತೋಷವಾಗಿ ಆಡಿಕೊಳ್ಳುತ್ತಿದ್ದಳು.

ಈ ರಾಜ್ಯಕ್ಕೆ ಸಮೀಪದಲ್ಲೇ ಮತ್ತೊಂದು ರಾಜ್ಯವಿತ್ತು. ಅಲ್ಲಿಯ ರಾಜನನ್ನು ಶತ್ರುಗಳು ಕೊಂದು ರಾಜ್ಯವನ್ನು ಆಕ್ರಮಿಸಿಕೊಂಡರು. ರಾಜಕುಮಾರನು ಮಾತ್ರ ವೇಷ ಮರೆಸಿ ತಪ್ಪಿಸಿಕೊಂಡು ಈ ಅರಣ್ಯವನ್ನು ಸೇರಿದನು.

ಆತನು ಅಲೆದಲೆದು ಅತ್ತೀಕಾಯಾಗಿ ಒಂದು ಮರದ ಕೆಳಗೆ ಮಲಗಿಕೊಂಡನು.

ಬೆಳದಿಂಗಳ ರಾತ್ರಿಯಾದ್ದರಿಂದ ಕಾಂತಿಬಾಲೆ ಸೌಂದರ್ಯ ಶೋಭೆಯಿಂದ ಪ್ರಕಾಶಿಸುತ್ತಾ ನಾಟ್ಯವಾಡುತ್ತಾ ತನ್ನ ಕೋಕಿಲಕಂಠದಿಂದ ಗಾನಮಾಡುತ್ತಾ ಆತನು ಮಲಗಿದ್ದ ಕಡೆ ಬಂದಳು.

ಇಂತಹ ಸುಂದರಿಯನ್ನು ಎಂದೂ ಕಂಡಿರಲಿಲ್ಲ ರಾಜಕುಮಾರ. ಆತನು ಈಕೆ ಆ ದೇಶದ ರಾಜಕುಮಾರಿ ಎಂದು ಅರಿಯ. ಆಕೆ ದೇವಕನ್ಯೆ ಇರಬಹುದೆಂದು ತಿಳಿದು ಆಕೆಯ ಅಂದಚೆಂದಗಳನ್ನೂ, ಆಟಪಾಟಗಳನೂ ಆತನು ಎವೆಯಿಕ್ಕದೆ ಗಮನಿಸುತ್ತಿರುವಲ್ಲಿ ಕಾಂತಿಬಾಲೆ ಅದೃಶ್ಯಳಾದಳು.

ರಾಜಕುಮಾರ ಆಕೆಗಾಗಿ ಪ್ರತಿದಿನವೂ ಹುಡುಕಾಡುತಿದ್ದ. ರಾತ್ರಿ ಹೊತ್ತಿನಲ್ಲಿ ಮಾತ್ರ ಆಕೆ ಆ ಮರದ ಬಳಿ ಕಾಣಿಸುವಳು; ಆತನು ನೋಡುತ್ತಿರುವಂತೆಯೇ ಮಾಯವಾಗುವಳು. ದಿನದಿನಕ್ಕೂ ಆಕೆಯ ಸೌಂದರ್ಯವು ಹೆಚ್ಚುತ್ತಿರುವಂತೆ ಕಾಣಿಸಿತು ರಾಜಕುಮಾರನಿಗೆ. ಇಂತಹ ಅಪರೂಪವಾದ ಕನ್ಯೆಯನ್ನು ಮಾತನಾಡಿಸಿ, ಆಕೆಯ ವಿಷಯವನ್ನು ತಿಳಿದುಕೊಳ್ಳಬೇಕೆಂಬ ನಿರ್ಧಾರ ಹೆಚ್ಚಾಯಿತು.

ಆತನು ತಿಂಡಿ ತೀರ್ಥವಿಲ್ಲದೆ ಆಕೆಗಾಗಿ ಅಲೆದಾಡುತ್ತಿರುವಾಗ ಯೋಗ್ಯಳಾದ ಏಳನೆಯ ವನಕನ್ಯೆಯು ಓರ್ವ ಮುದುಕಿಯ ರೂಪದಲ್ಲಿ ಆತನಿಗೆ ಕಾಣಿಸಿಕೊಂಡಳು. ತಾನು ಹಿಂದೆ ಕಾಂತಿಬಾಲೆಗೆ ಆಶೀರ್ವಾದ ಮಾಡಿದ್ದಂತೆ ಪಕ್ಕದ ದೇಶದ ರಾಜ







ಕುಮಾರನು ಅದೃಷ್ಟವಶಾತ್ ಈ ಅಡವಿಗೆ ಬಂದಿರುವನೆಂದು ಅರಿತಳು. ಕಾಂತಿಬಾಲೆ ಇಷ್ಟರಲ್ಲಿಯೇ ಶಾಪವಿಮುಕ್ತಳಾಗುವಳಲ್ಲಾ ಎಂದು ಮನಸ್ಸಿನಲ್ಲಿ ಬಹಳ ಸಂತೋಷ ಪಟ್ಟಳು.

ಆಕೆ ಆನಂದದಿಂದ ಆ ರಾಜಕುಮಾರನನ್ನು ತನ್ನ ಕುಟೀರಕ್ಕೆ ಕರೆದುಕೊಂಡು ಹೋದಳು. ಪರಿಪರಿವಿಧದಲ್ಲಿ ಆದರಿಸಿದಳು. ತರುವಾಯ ಕಾಂತಿಬಾಲೆಯ ವಿಷಯವೆಲ್ಲ ಹೇಳಿದಳು. ಅತ್ಯಂತ ಮಹಿಮೆಯುಳ್ಳ ಒಂದು ಬಟ್ಟಲನ್ನು ಕೂಡ ಬಹುಮಾನಮಾಡಿದಳು. ಮುದುಕಿಯ ಆಶೀರ್ವಾದ ಪಡೆದು ಮತ್ತೆ ಕಾಂತಿಬಾಲೆಯನ್ನು ಹುಡುಕಲು ರಾಜಕುಮಾರನು ಹೊರಟನು.

ರಾಜಕುಮಾರನು ದಾರಿ ತಪ್ಪಿ ಈ ಅಡವಿಗೆ ಬಂದು ಕಾಂತಿಬಾಲೆಗಾಗಿ ಹುಡುಕುತ್ತಿರುವ ವಿಷಯ ದುಷ್ಟಕನ್ಯೆಗೆ ಈ ವರೆವಿಗೆ ತಿಳಿದಿರಲಿಲ್ಲ. ಆದರೆ ಈ ವಿಷಯ ತಿಳಿದಕೂಡಲೇ ಕೆಲದಿನಗಳವರೆವಿಗೂ ಅವರಿಬ್ಬರೂ ಸಂಧಿಸದಂತೆ ಮಂತ್ರ ಹಾಕಿದಳು.

'ಹುಣ್ಣಿಮೆ ದಾಟುವವರೆವಿಗೂ ತನ್ನ ಮಂತ್ರಶಕ್ತಿಯಿಂದ ಅವರಿಬ್ಬರೂ ಸಂಧಿಸದಂತೆ ಮಾಡಿಬಿಟ್ಟರೆ ಆಮೇಲೆ ಕಾಂತಿಬಾಲೆ ಕುರೂಪಿ ಆಗುವಳು. ಆಗ ರಾಜಕುಮಾರ ಅವಳನ್ನು ನೋಡಿ ಅಸಹ್ಯಪಟ್ಟುಕೊಳ್ಳುವನು. ಮೆಚ್ಚಲಾರ. ಅದರಿಂದ ಏಳನೇ ಕನ್ಯೆ ಕೊಟ್ಟ ವರ ವ್ಯರ್ಥವಾಗುವುದು' ಎಂದು ದುಷ್ಟಕನ್ಯೆಯ ಭಾವನೆ.

ದುಷ್ಟಕನ್ಯೆಯ ಮಂತ್ರಪ್ರಭಾವದಿಂದ ರಾಜಕುಮಾರನು ಮತ್ತೆ ನಿದ್ರಾಹಾರಗಳಿಲ್ಲದೆ ಎಷ್ಟು ಹುಡುಕಿದರೂ ಕಾಂತಿಬಾಲೆ ಕಣ್ಣಿಗೆ ಕಾಣಿಸಲಿಲ್ಲ.

ಕೆಲದಿನಗಳ ತರುವಾಯ ಒಂದು ದಿನ ನಿರಾಶೆ ಹೊಂದಿ ಒಂದು ದೊಡ್ಡ ಅರಳೀ ಮರದ ಕೆಳಗೆ ಯೋಚನಾಕ್ರಾಂತನಾಗಿ ಕುಳಿತುಕೊಂಡ.

ಆ ವೇಳೆಗೆ ಹುಣ್ಣಿಮೆಯು ಹೋಗಿ ಅಮಾವಾಸ್ಯೆ ಬಂದಿತ್ತು. ಸರಿಯಾಗಿ ಅಮಾವಾಸ್ಯೆಯದಿನ ದುಷ್ಟಕನ್ಯೆಯು ಪ್ರಯೋಗಿಸಿದ ಮಂತ್ರಶಕ್ತಿಯ ಬಲ ಸರಿಹೋಗು



ವುದು. ಮತ್ತೆ ಮಂತ್ರ ಹಾಕಲು ಆಕೆಗೆ ಸ್ವಲ್ಪ ಕಾಲ ಬೇಕು.

ರಾಜಕುಮಾರ ಅರಳೀ ಮರದ ಕೆಳಗೆ ಕುಳಿತುಕೊಂಡಿರುವಾಗ ಇದ್ದಕ್ಕಿದಂತೆಯೇ ಮೋಡಗಳು ಕವಿದು ಗುಡುಗು, ಸಿಡಿಲುಗಳು ಭೋರ್ಗರೆದು ಜೋರಾಗಿ ಮಳೆ ಸುರಿಯಲು ಆರಂಭಿಸಿತು. ಆಗ ಒಂದು ಮಿಂಚು ಹೊಳೆಯಿತು. ಆ ಮಿಂಚಿನ ಬೆಳಕಿನಲ್ಲಿ ಮರದಡಿ ಏನೋ ಕದಲಿದಂತೆ ಕಾಣಿಸಿತು ಹತ್ತಿರ ಹೋಗಿ ರಾಜಕುಮಾರ ನೋಡಿದ. ಓರ್ವ ಮುದುಕಿ ಮುಸುಕನ್ನು ಎಳೆದು ಕೊಂಡು ಮಲಗಿದ್ದಳು. ಮೆಲ್ಲನೆ ಆತನು ಮುಸುಕನ್ನೆಳೆದನು: ಸಾಯುವ ಸ್ಥಿತಿಯೇನೋ ಎಂದು ಅಜ್ಜಿ ತನಗೆಕೊಟ್ಟ ಬಟ್ಟಲಲ್ಲಿದ್ದ ನೀರನ್ನು ಆ ಮುದುಕಿಯ ಬಾಯಿಯಲ್ಲಿ ಸುರಿದ.

ಆತನು ಮುಟ್ಟಿದ ತಕ್ಷಣವೇ ಆ ಮುದುಕಿ ಸುಂದರಿಯಾದ ರಾಜಕುಮಾರಿಯಾಗಿ ರೂಪ ಬದಲಾಯಿಸಿದಳು. ಈ ಸುಂದರಿಯೇ ಅಜ್ಜಿ ಹೇಳಿದ ಕಾಂತಿಬಾಲೆ ಎಂದು ಗ್ರಹಿಸಿದ. ಮತ್ತೆ ಸ್ವಲ್ಪಹೊತ್ತಿಗೆ ಮಳೆ ನಿಂತು, ಬೆಳಗಾಯಿತು. ಹುಟ್ಟಿದಾಗಲಿಂದ ಇಂದೇ ಕಾಂತಿಬಾಲೆ ಬೆಳಕನ್ನು ಕಂಡದ್ದು! ಆಕೆಗೆ ಶಾಪವಿಮುಕ್ತಿ ಆದಕೂಡಲೇ ಏಳುಜನ ಕನ್ಯೆಯರು ಬಂದು, ರಾಜಕುಮಾರ ಮತ್ತು ಕಾಂತಿಬಾಲೆಯನ್ನು ರಾಜನಲ್ಲಿಗೆ ಕರೆದು ಕೊಂಡು ಹೋದರು. ಅವರಿಬ್ಬರಿಗೂ ಅತಿ ವೈಭವದಿಂದ ವಿವಾಹ ಆಯಿತು. ಸುಖವಾಗಿದ್ದರು ಅವರು. ಕಾಂತಿಬಾಲೆಯ ವಿವಾಹಸಮಯದಲ್ಲಿ ಏಳುಜನ ಕನ್ಯೆಯರಿಗೂ ಬಹಳ ಬೆಲೆ ಬಾಳುವ ಬಹುಮಾನ ಕೊಟ್ಟು ಬಹುವಾಗಿ ಸತ್ಕರಿಸಿದ ರಾಜ.

ದುಷ್ಟಕನ್ಯೆಯನ್ನು ಹಿಡಿದು ಶೂರ್ಪನಖಿಯಂತೆ ಕಿವಿ, ಮೂಗುಗಳನ್ನು ಕತ್ತರಿಸಿ ಅಡವಿಗೆ ಅಟ್ಟಿದರು. ಪರರ ಸುಖ ನೋಡಿ ಸಹಿಸದ ದುಷ್ಟರ ಗತಿ ಕಡೆಗೆ ಇದೇ.






ಪೂರ್ವಕಾಲದಲ್ಲಿ ಧಾರಾನಗರವನ್ನು ಉಗ್ರಸೇನಮಹಾರಾಜನು ಆಳುತ್ತಿದ್ದನು. ಆತನಿಗೆ ಸಿಟ್ಟುಬಂದರೂ, ಸಂತೋಷವಾದರೂ ಮಿತಿ ಇರುತ್ತಿರಲಿಲ್ಲ. ಅತಿರೇಕವಾಗುತಿತ್ತು.

ಆತನಿಗೆ ರೂಪಸುಂದರಿ, ಹೇಮಸುಂದರಿ, ಮತ್ತು ಗುಣಸುಂದರಿ ಎಂಬ ಮೂವರು ಕುವರಿಯರಿದ್ದರು. ಗುಣಸುಂದರಿ ಹುಟ್ಟಿದ ಕೆಲದಿನಗಳಲ್ಲೇ ಮಹಾರಾಣಿ ಸ್ವರ್ಗಸ್ಥಳಾದಳು. ಆಗಿನಿಂದ ಮಹಾರಾಜನು ತನ್ನ ಕುವರಿಯರಿಗೆ ತಾಯಿಯಂತೆಯೇ ತಾನೇ ಅವರ ಲಾಲನೆ ಪಾಲನೆ ಸ್ವತಃ ನೋಡಿಕೊಳ್ಳುತ್ತಿದ್ದ. ಅವರನ್ನು ಅತಿ ಮಮತೆಯಿಂದ ಬೆಳೆಸುತ್ತಿದ್ದ.

ಈ ಮಮಕಾರದಲ್ಲಿ ಬಿದ್ದು, ಮಹಾರಾಜನು ರಾಜ್ಯ ಮತ್ತು ರಾಜಧರ್ಮವನ್ನು ಮರತೇಬಿಟ್ಟ. ಮಂತ್ರಿಗಳು, ಸೇನಾಧಿಪತಿ ಮೊದಲಾದ ಪ್ರಮುಖರು ಮಹಾರಾಜನನ್ನು ಸಂದರ್ಶಿಸಿ "ಮಹಾಸ್ವಾಮಿ, ತಮಗೆ ಪುತ್ರಸಂತಾನವಿಲ್ಲ. ಮುಂದೆ ರಾಜ್ಯದ ಗತಿ ಏನು? ನಮ್ಮ ಮನವಿಯನ್ನು ಮನ್ನಿಸಿ ಪುನಃ ಮದುವೆ ಮಾಡಿಕೊಂಡ ಪಕ್ಷದಲ್ಲಿ ತಮ್ಮ ವಂಶೋದ್ಧಾರಕನು ಹುಟ್ಟಬಹುದು. ನಮ್ಮ ಕೋರಿಕೆಯು ನೆರವೇರುವುದು" ಎಂದು ಬಿನ್ನವಿಸಿಕೊಂಡರು.

ಈ ಮನವಿಯನ್ನು ಕೇಳಿ ಮಹಾರಾಜ ಉರಿದುಬಿದ್ದ. "ವಂಶಕ್ಕೆ ಆಧಾರ ಮಗನು ಮಾತ್ರವೇ? ಕುಮಾರ್ತೆಯರು ಮಾತ್ರ ನನ್ನ ಅಂಶವಲ್ಲವೇ? ನನ್ನ ರಾಜ್ಯವನ್ನು ನನ್ನ ಕುವರಿಯರಿಗೆ ಕೊಡುವೆನು. ಅವರೇ ನನ್ನ ರಾಜ್ಯವನ್ನು ಆಳುವರು. ನನ್ನ ಮಾತಿಗೆ ಯಾರು ಅಡ್ಡ ಬರುವರೋ ನೋಡುತ್ತೇನೆ" ಎಂದು ಪರಿವಾರವೆಲ್ಲವನ್ನೂ ಗದರಿಸಿದ.

ಹೀಗಿರುವಲ್ಲಿ ಒಂದು ಸಂಕ್ರಾಂತಿ ಹಬ್ಬ ಬಂತು. ಅಂದು ಆ ಊರಿನ ಪ್ರಜೆಗಳೆಲ್ಲರೂ ಮಹಾರಾಜನು ಮಮತೆಯಿಂದ ಪಾಲಿಸಿದ್ದ ಮೂವರು ಕುವರಿಯರಿಗೂ ಅಪೂರ್ವ ಕಾಣಿಕೆಗಳನ್ನು ತಂದು ಸಮರ್ಪಿಸಿದರು. ಆ ಕಾಣಿಕೆಗಳನ್ನೆಲ್ಲಾ ನೋಡಲು ಕಾಣುವಂತೆ ಸಾಲಾಗಿ ಅಣಿಮಾಡಿಸಿ ತಮಗೆ ಇಷ್ಟ

'ನಾಗೇಂದ್ರ'




ಬಂದುದನ್ನು ಆರಿಸಿಕೊಳ್ಳುವಂತೆ ಮೂವರು ಕುವರಿಯರಿಗೆ ಮಹಾರಾಜ ಹೇಳಿದ.

ಹಿರಿಯರಾದ ರೂಪ ಮತ್ತು ಹೇಮ ಸುಂದರಿಯರು ಆ ಬಹುಮಾನಗಳಲ್ಲಿ ಬೆಲೆ ಬಾಳುವ ಪೀತಾಂಬರ, ರತ್ನಾಭರಣಗಳನ್ನು ಗಬಗಬನೆ ಬಾಚಿಕೊಂಡರು. ಸಾತ್ವಿಕಳಾದ ಗುಣಸುಂದರಿ ಮಾತ್ರ "ಪತಿವ್ರತಾ ಕಥಾ ಲಹರಿ" ಎಂಬ ಪುಸ್ತಕವನ್ನು ಆರಿಸಿ ಕೊಂಡಳು.

ಪಿತೃಭಕ್ತಿಯುಳ್ಳವಳಾದ್ದರಿಂದ ಆ ರಾಶಿ ಯಿಂದ ಒಂದು ಸೊಗಸಾದ ಚಿತ್ರವನ್ನು ಆರಿಸಿ, ವೃದ್ಧನಾದ ತಂದೆಗೆ ತೆಗೆದುಕೊಂಡು ಹೋಗಿ ಕೊಟ್ಟಳು. ಮಹಾರಾಜನು ಆನಂದ ಭರಿತನಾದ. "ನನ್ನ ಕಿರಿಮಗಳಿಗೆ ನನ್ನಮೇಲೆ ಎಷ್ಟು ಮಮತೆ ನೋಡಿ" ಎಂದು ಆ ಚಿತ್ರವನ್ನು ಪರಿವಾರಕ್ಕೆಲ್ಲಾ ಅವಿತೋ ತ್ಸಾಹದಿಂದ ತೋರಿಸಿದ.

ಮಹಾರಾಜನಿಗೆ ಹರಮತಿ, ಕಾಲ ಮತಿಯರೆಂಬ ಇಬ್ಬರು ಸೋದರಳಿಯಂದಿ ರಿದ್ದರು. ಅವರು ಪ್ರಪಂಚ ಜ್ಞಾನವಿಲ್ಲದ ಶುದ್ಧ ಶುಂಠರು, ಉಂಡಾಡಿಗಳು. ಆದರೂ ಅವರೆಂದರೆ ಮಮತೆ ರಾಜನಿಗೆ. ಅವರಿಬ್ಬ ರನ್ನು ಹಿರಿಯ ಕುವರಿಯರಿಗೆ ನಿಶ್ಚಯಿಸಿ, ಕಿರಿಯ ಮಗಳಿಗೆ ವರನು ಸಿಕ್ಕಿದಕೂಡಲೇ ಮೂರು ಮದುವೆಗಳನ್ನೂ ಒಟ್ಟಿಗೆ ಮಾಡಿ ರಾಜ್ಯವನ್ನು ಕುವರಿಯರಿಗೆ ಒಪ್ಪಿಸಿ, ತಾನು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಯೋಚಿ ಸುತ್ತಿದ್ದ ಮಹಾರಾಜ.

ಇಷ್ಟರಲ್ಲಿ ಮಹಾರಾಜನಿಗೆ ಷಷ್ಠಿಪೂರ್ತಿ ಮಹೋತ್ಸವು ಅತಿವೈಭವವಾಗಿ ನಡೆಯಿತು. ಅಂದು ಆತನು ಸರ್ವಾಲಂಕಾರಭೂಷಿತ ನಾಗಿ ಕುವರಿಯರನ್ನು ಸಂಗಡ ಕರೆದು ಕೊಂಡು ಸಭೆಗೆ ಹೋದ. ತುಂಬಿದ ಸಭೆಯಲ್ಲಿ ಮಹಾರಾಜನು "ಸಭಿಕರೇ! ಈ ಹದಿನಾರು ವರ್ಷಗಳಿಂದ ನನ್ನ ಸರ್ವ ಸ್ವವನ್ನು ವಿನಿಯೋಗಿಸಿ ಸಾಧಿಸಿದ ಸುಗುಣ ರತ್ನಗಳು ಈ ನನ್ನ ಕುವರಿಯವರು. ಇನ್ನು ಇವರಿಗೆ ನನ್ನ ರಾಜ್ಯವನ್ನು ಕೊಡುವೆನು. ಇವರಿಗೆ ನಾನೆಂದರೆ ಎಷ್ಟು ಭಕ್ತಿ, ಎಷ್ಟು ಪ್ರೇಮ! ಅದು ಎಂತಹದೋ ಅವರೇ

ಹೇಳುವರು. ಕೇಳಿ ಆನಂದಿಸುವಿರಂತೆ...." ಎಂದು ಹೇಳಿ ಆಸನಾರೂಢನಾದ.

ಆಗ ಹಿರಿಯ ಮಗಳಾದ ರೂಪಸುಂದರಿ ಎದ್ದು ಸಭೆಗೆ ವಂದಿಸಿ ತಡವರಿಸದೆ ಸಿಹಿ ಮಾತುಗಳಿಂದ "ನನಗೆ ತಂದೆಯೇ ಪ್ರಾಣ, ತಂದೆಯೇ ದೈವವು, ತಂದೆಯೇ ಸರ್ವಸ್ವ" ಎಂದು ಮುಂತಾಗಿ ಅಸತ್ಯ ನುಡಿದಳು.

ತರುವಾಯ ಎರಡನೆಯವಳು ಸಭೆಗೆ ನಮಸ್ಕಾರಮಾಡಿ ತನ್ನ ಅಕ್ಕನು ಹೇಳಿದಂತೆಯೇ "ನಾನು ನನ್ನ ತಂದೆಯ ಸೇವೆಗಾಗಿ ಜನಿಸಿದೆ. ಜನ್ಮಜನ್ಮಕ್ಕೂ ಅವರೇ ನನ್ನ ತಂದೆಯಾಗಬೇಕೆಂದು ತಪಸ್ಸು ಮಾಡುವೆನು" ಎಂದು ಸಟೆಯಾಡಿ ಕುಳಿತಳು.

ರೂಪ, ಹೇಮರು ಕೇವಲ ಸ್ವಾರ್ಥಪರರು. ತಂದೆಯನ್ನು ಮೆಚ್ಚಿಸಬೇಕೆಂದು ಸುಳ್ಳಾಡಿದರು. ಗುಣಸುಂದರಿ ಮುಗ್ಧಳು. ನಿಜಕ್ಕೂ ಆಕೆಗೆ ಅಕ್ಕಂದಿರಿಗಿಂತ ತಂದೆ ಎಂದರೆ ಅಮಿತ ಪ್ರೀತಿ. ಆ ವಿಷಯ ಮಹಾರಾಜನಿಗೂ ತಿಳಿದಿದೆ. ಆದ್ದರಿಂದಲೇ ಹಿರಿಯ ಕುವರಿಯರಿಗಿಂತಲೂ ಕಿರಿಯವಳಾದ ಗುಣಸುಂದರಿ ತನ್ನನ್ನು ಮತ್ತಷ್ಟು ಹೆಚ್ಚಾಗಿ ಹೊಗಳುವಳೆಂದು ಆಶಿಸಿದ್ದನು.

ನಿಜ ಹೇಳಿದರೆ ತನ್ನ ಉತ್ತರ ತಂದೆಗೆ ರುಚಿಸದು. ಆದ್ದರಿಂದ ಇಂತಹ ಸಂದರ್ಭದಲ್ಲಿ ಮೌನ ವಹಿಸುವದು ಸೂಕ್ತವೆಂದು ಗುಣಸುಂದರಿ ಮಾತನಾಡದೆ ನಿಂತಳು.





"ಕೃತಘ್ನಳೇ! ಹುಚ್ಚುಚ್ಚಾಗಿ ಮಾತ ನಾಡುತ್ತಿರುವೆ. ಗಂಡನು ತುಂಟ, ಕುರುಡ ಮೂಗ, ಕಿವುಡ, ವೃದ್ಧ, ದರಿದ್ರನೇ ಆಗಿದ್ದರೆ ಆತನೇ ಸರ್ವಸ್ವವೆಂದು ಪ್ರೇಮಿಸುವೆಯಾ?" ಎಂದು ಪ್ರಶ್ನೆ ಮಾಡಿದ ಮಹಾರಾಜ.

"ದೇವರು ಅಂತಹ ಗಂಡನನ್ನೇ ನಿರ್ಣಯಿಸಿದ್ದ ಪಕ್ಷದಲ್ಲಿ ಸಂತೋಷದಿಂದ ಶಿರಸಾ ವಹಿಸಿ, ಪ್ರೀತಿಸುವೆನು" ಎಂದು ನಿರ್ಭಯವಾಗಿ ಉತ್ತರವಿತ್ತಳು ಗುಣಸುಂದರಿ. "ದೇವರು ಯಾರು? ನಾನೋ, ದೇವರೋ ನಿನಗೆ ಪತಿಯನ್ನು ನಿರ್ಣಯಿಸುವುದು" ಎಂದ ರಾಜ. ಅದಕ್ಕೆ ಗುಣಸುಂದರಿ ಮೆಲ್ಲನೆ "ದೇವರೇ; ಅದರಲ್ಲಿ ಸಂದೇಹವಿಲ್ಲ. ಅಪ್ಪಾಜಿ" ಎಂದಳು. ಆಗ ಮಹಾರಾಜ "ಓಹೋ, ಅಷ್ಟು ಸೊಕ್ಕೇ ನಿನಗೆ? ತಕ್ಕ ಶಾಸ್ತಿ ಮಾಡುತ್ತೇನೆ ಇರು" ಎಂದು ಕೂಗಾಡುತ್ತಾ ಆಗ್ರಹದಿಂದ ಸಭೆಯಿಂದ ಹೊರಟುಹೋದ.

ಆಕೆಯ ರೀತಿಯನ್ನು ಕಂಡು, ಆಕೆ ನಾಚುತ್ತಿರುವಳೆಂದುಕೊಂಡ ಮಹಾರಾಜ. "ಮಗಳೇ, ನಿನ್ನ ಅಕ್ಕಂದಿರಿಗಿಂತಲೂ ನಿನಗೆ ನನ್ನಮೇಲೆ ಪ್ರೀತಿ ಹೆಚ್ಚು. ನನ್ನ ವಿಷಯ ಅವರಿಗಿಂತಲೂ ನೀನೇ ಚೆನ್ನಾಗಿ ಹೇಳಬಲ್ಲೆ ಹೇಳು ಮಗೂ!" ಎಂದ.

ಆಗ ಗುಣಸುಂದರಿ "ಅಪ್ಪಾ, ತಂದೆಯನ್ನು ಮಗಳು ಎಷ್ಟು ಪ್ರೀತಿಸಬಹುದೋ ಅಷ್ಟು ನಾನು ನಿಮ್ಮನ್ನು ಪ್ರೀತಿಸುವೆನು. ಆದರೆ ಸ್ತ್ರೀಗೆ ಪತಿಯೇ ಸರ್ವಸ್ವ. ವಿವಾಹವಾದಾಗಿನಿಂದ ಸತಿಗೆ, ಪತಿಯನ್ನು ಸೇವಿಸುವದೇ ನಿಯಮ" ಎಂದು ಮುಚ್ಚು, ಮರೆ ಇಲ್ಲದೆ ಹೇಳಿದಳು. ಮಹಾರಾಜನು ಉಗ್ರಸ್ವರೂಪಿಯಾದ.

ರಾಜ ಬಯಸಿದರೆ ಅಡ್ಡಿ ಉಂಟೆ? ಮರುದಿನವೇ ಮುಹೂರ್ತ ಇಡಿಸಿದ ಮಹಾರಾಜ. ರೂಪಸುಂದರಿಯನ್ನು ಹರಮತಿಗೂ, ಹೇಮಸುಂದರಿಯನ್ನು ಕಾಲಮತಿಗೂ ಕೊಟ್ಟು ವೈಭವದಿಂದ ವಿವಾಹವಾಯಿತು. ಪಾಪ! ಗುಣಸುಂದರಿಗೆ ಮಾತ್ರ ತುಂಟ, ಕುರುಡ, ಕಿವುಡ, ಮೂಗನೂ ಆದ ಒಬ್ಬ ದರಿದ್ರನನ್ನು ಕರೆದುಕೊಂಡು ಬಂದು ಗಂಟು ಹಾಕಿದರು.

ತಂದೆ ಮಾಡಿದ ಭೀಕರ ಕಾರ್ಯಕ್ಕೆ ಗುಣಸುಂದರಿ ಎಷ್ಟುಮಾತ್ರವೂ ಚಲಿಸದೆ ದೇವರಮೇಲೆ ಭಾರ ಹಾಕಿ ನಿಶ್ಚಿಂತಳಾಗಿದ್ದಳು. ತನಗೆ ಈ ಪತಿ ಲಭಿಸಿದ್ದು ಈಶ್ವರನ ಅನುಗ್ರಹವೇ ಎಂದು ನಂಬಿ, ಶಿರಸಾ ವಹಿಸಿ ಆಕೆ ಭಕ್ತಿಯಿಂದ ಪತಿಸೇವೆ ಮಾಡುತ್ತಿದ್ದಳು.

ಮದುವೆಯಾದ ಮರುಕ್ಷಣದಿಂದ ರೂಪ, ಹೇಮರು ತಮ್ಮ ಅಂದಚಂದಗಳಿಗೆ ಮೆಚ್ಚುತ್ತಾ ತಂತಮ್ಮ ಅದೃಷ್ಟಕ್ಕೆ ಗರ್ವಪಡುತ್ತಾ ಗಂಡಂದಿರೊಂದಿಗೆ ಸೇರಿ ತಂಗಿಯನ್ನೂ ಮೈದುನನ್ನೂ ಅಪಹಾಸ್ಯ ಮಾಡುತ್ತಿದ್ದರು. ಯಾರು ಏನೆಂದುಕೊಂಡರೂ ಎಷ್ಟೇ ಕಷ್ಟ ಕೊಟ್ಟರೂ, ಗುಣಸುಂದರಿ ಮಾತ್ರ ಅವುಗಳನ್ನು ಲೆಕ್ಕಿಸದೆ ತಾಳ್ಮೆಯಿಂದಿದ್ದಳು.

ದೇವರನ್ನು ನಂಬಿದವರಿಗೆ ಎಂದಿಗೂ ಕೇಡಾಗದೆಂದು ಹೇಳುವರು ಹಿರಿಯರು. ಮೊದಲಿನಿಂದಲೂ ದೇವರನ್ನೇ ನಂಬಿದ್ದ ಗುಣಸುಂದರಿಯ ಜೀವಮಾನದಲ್ಲಿ ಒಮ್ಮಿಂದೊಮ್ಮೆ ಒಂದು ವಿಚಿತ್ರ ಬದಲಾವಣೆ ಆಯಿತು. ಮಹಾರಾಜನು ಗುಣಸುಂದರಿಗೆ ತಕ್ಕ ಶಾಸ್ತಿ ಮಾಡುವೆನೆಂದು ಆರಿಸಿ ತಂದ ಆಕೆಯ ಗಂಡ, ಎಲ್ಲರೂ ನೆನೆಸಿದ್ದಂತೆ ತುಂಟನಲ್ಲ, ಕುರುಡನಲ್ಲ, ಮೂಗನಲ್ಲ, ಕಿವುಡನೂ ಅಲ್ಲ.



ಇದ್ದಕ್ಕಿದ್ದಂತೆಯೇ ಆತನು ತಮಾಷೆಯಾಗಿ ನಗೆಯುತ್ತಲೂ, ಚಾಲೂಕಾಗಿ ಮಾತನಾಡುತ್ತಾ, ಅತ್ತಿಗೆ ಮತ್ತು ಅವರ ಗಂಡಂದಿರನ್ನು ಮೂದಲಿಸಲು ಮೊದಲುಮಾಡಿದನು. ಅವರಿಗೇನೂ ತೋರದೆ ಕಂಗಾಲಾದರು. ಈವಿಧವಾಗಿ ರಾಜನ ಕಿರಿಯ ಅಳಿಯ ವಿಚಿತ್ರರೀತಿಯಲ್ಲಿ ವ್ಯವಹರಿಸತೊಡಗಿದನು. ಕೋಟೆಯಲ್ಲಿದ್ದವರಿಗೆಲ್ಲ ಈ ಸುದ್ದಿ ಕಿಚ್ಚಿನಂತೆ ಹರಡಿತು. ಈವಿಷಯ ಕೇಳಿ, ಮಹಾರಾಜನೂ ಓಡಿ ಬಂದು ಕಣ್ಣಾರೆ ಕಂಡ.

ಗುಣಸುಂದರಿಗೆ ಬುದ್ಧಿ ಕಲಿಸಲು ಏನೋ ಮಾಡಿದರೆ, ಇದೇನೋ ತನಗೇ ಪ್ರತಿಯಾಯಿತಲ್ಲ ಎಂದು ಮಹಾರಾಜ ಆಕ್ರೋಶದಿಂದ "ಯಾರೋ ನೀನು? ನಿನ್ನ ಆರ್ಭಟ



ವೇನು? ನನಗೆ ಮೋಸಮಾಡಿದೆಯಾ? ನೋಡಿಕೋ ನಿನ್ನಗತಿ ಏನಾಗುವುದೋ" ಎಂದು ಗರ್ಜಿಸಿದನು.

ಅದಕ್ಕೆ ಗುಣಸುಂದರಿಯ ಗಂಡ ಶೀವಿಯಿಂದ 'ನಾನೇ! ನಿಮ್ಮ ನೆಚ್ಚಿನ ಅಳಿಯ ದೈವಾಧೀನ" ಎಂದು ಮಂದಹಾಸ ಬೀರಿದ. ಅದನ್ನು ನೋಡಿ ಮಹಾರಾಜ ಆವೇಶ ಪೂರಿತನಾಗಿ ದೈವಾಧೀನನನ್ನು ಹೊಡೆಯಲು ಹೋದ. ಆದರೆ ಕಾಲು ಜಾರಿ ಕೆಳಗೆ ಬಿದ್ದುಬಿಟ್ಟ. ಪ್ರಮಾದಕರವಾದ ಏಟು ತಗಲಿದುದರಿಂದ ಮಹಾರಾಜ ಏಳಲಾರದಾದ. ಗ್ರಹಚಾರದಿಂದ ಆ ಏಟು ತೀವ್ರವಾಗಿ ಆತನು ಹಾಸಿಗೆ ಬಿಟ್ಟು ಏಳದಂತಾಯಿತು.

ಗುಣಸುಂದರಿ ದುಃಖಿಸುತ್ತಾ ತಂದೆಯ ಹತ್ತಿರ ಹೋದಳು. ಆಗ "ಇವಳು ನನ್ನನ್ನು ಸಾಯಿಸಲು ಜನಿಸಿದಳು. ಅವನ್ಯಾವನೋ ಪಿಶಾಚಿ. ಇವರನ್ನು ಅಟ್ಟಿ ಇಲ್ಲಿಂದ" ಎಂದು ಮಹಾರಾಜ ಕೂಗಾಡಿದ.

ಅಕ್ಕಂದಿರಿಬ್ಬರೂ ಆಕೆಯನ್ನು ನೋಡಿ "ಹುಟ್ಟಿದ ದಿನ ತಾಯಿಯನ್ನು ಸಾಯಿಸಿದೆ. ಮದುವೆಯ ದಿನ ತಂದೆಯನ್ನು ಹಾಸಿಗೆ ಹಿಡಿಸಿದೆ. ಸಾಕು, ನಡೆ ನಡೆ" ಎಂದು ಗದರಿಸಿದರು.

ಈ ಮಾತುಗಳನ್ನು ಕೇಳಿ ಗುಣಸುಂದರಿಯ ಗಂಡನಿಗೆ ಪೌರುಷ ಬಂತು. ಹೆಂಡತಿಯನ್ನು ಕರೆದುಕೊಂಡು ಮಾವನ ಹತ್ತಿರ ಹೋಗಿ "ಎಂದಿಗಾದರೂ ನಿನಗೆ ನಾವೇ ದಿಕ್ಕು ಜ್ಞಾಪಕವಿರಲಿ" ಎಂದು ಎಚ್ಚರಿಸಿದನು. ಹೆಂಡತಿಯೊಂದಿಗೆ ದೈವಾಧೀನನು ಆ ಕೋಟೆ ಬಿಟ್ಟನು.

ಆ ಕೋಟೆಗೆ ಸ್ವಲ್ಪದೂರದಲ್ಲಿದ್ದ ಕೊರಚರ ಪಾಳ್ಯದಲ್ಲಿ ದೈವಾಧೀನ ವಾಸಕ್ಕಾಗಿ ಹೊರಟನು. ಅರಮನೆಯಲ್ಲಿ ನಡೆದ ಗಲಭೆ ಅಲ್ಲಿಗೂ ಸಹ ಈ ಮೊದಲೇ ಮುಟ್ಟಿತ್ತು. ರಾಜ್ಯಲಕ್ಷ್ಮಿಯು ಅರಮನೆ ಬಿಟ್ಟು ತಮ್ಮ ಪಾಳ್ಯಕ್ಕೆ ಬರುವಳೆಂದು ಅವರು ಪರಮಾನಂದಭರಿತರಾದರು. ದೈವಾಧೀನನಿಗೂ, ಆತನ ಪತ್ನಿಗೂ ಭಕ್ತಿಯಿಂದ ಸ್ವಾಗತ ನೀಡಿದರು. ಒಂದು ಕ್ಷಣದಲ್ಲಿ ಅವರು ಆಕೆಗೆ ಪರ್ಣಶಾಲೆಯೊಂದನ್ನು ತಯಾರು ಮಾಡಿ






ದರು. ಕುಟುಂಬಕ್ಕೆ ಬೇಕಾದ ಸಾಮಾನು ಗಳನ್ನು ಕ್ಷಣಮಾತ್ರದಲ್ಲಿ ಶೇಖರಿಸಿದರು. ಈವಿಧವಾಗಿ ಈಗ ಗುಣಸುಂದರಿ ತನ್ನ ವಿಚಿತ್ರ ಪತಿಯೊಂದಿಗೆ ಕೊರಚರಪಾಳ್ಯದಲ್ಲಿ ಸಂಸಾರ ಪ್ರಾರಂಭ ಮಾಡಿದಳು. ಪಾಪ, ತಂದೆಯ ವಿಷಯ ನೆನೆಸಿಕೊಂಡರೆ ದುಃಖ ಉಮ್ಮಳಿಸಿ ಬರುತಿತ್ತು. ಆದರೆ ಅದನ್ನು ನುಂಗಿಕೊಂಡು ಭಕ್ತಿಶ್ರದ್ಧೆಗಳಿಂದ ತನ್ನ ಪತಿಯ ಸೇವೆ ಮಾಡುತ್ತಿದ್ದಳು.

ಮಹಾರಾಜನು ಹಾಸಿಗೆ ಹಿಡಿದಕೂಡಲೇ ಅರಮನೆಯಲ್ಲೆಲ್ಲಾ ರೂಪ, ಹೇಮ ಅವರದೇ ಅಧಿಕಾರ. ಗುಣಸುಂದರಿ ಪೂಜಿಸುತ್ತಿದ್ದ ಶ್ರೀರಾಜೇಶ್ವರಿ ವಿಗ್ರಹ, ಆಕೆ ನಿತ್ಯಪಾರಾಯಣ ಮಾಡುತ್ತಿದ್ದ 'ಪತಿವ್ರತಾ ಕಥಾಲಹರಿ' ಪುಸ್ತಕ ಇರುವುದು ಆ ಇಬ್ಬರು ಅಕ್ಕಂದಿರಿಗೆ ಸರಿತೋರಲಿಲ್ಲ. ಆದ್ದರಿಂದ ಅವುಗಳನ್ನು ಹೊರಗೆ ಬಿಸಾಡುವುದರಲ್ಲಿದ್ದರು.

ಈ ಸಂಗತಿ ದಾದಿ ಮೀನಾದೇವಿಗೆ ತಿಳಿಯಿತು. ಮೀನಾದೇವಿ ಗುಣಸುಂದರಿಗೆ ಅಚ್ಚುಮೆಚ್ಚಿನ ದಾದಿ. ಆ ಅಭಿಮಾನದಿಂದ ಗುಣಸುಂದರಿಗೆ ಅಪಚಾರ ನಡೆಯದಂತೆ, ರಾಜೇಶ್ವರೀ ವಿಗ್ರಹ 'ಪತಿವ್ರತಾ ಕಥಾಲಹರಿ' ಪುಸ್ತಕ ಮತ್ತು ಕೆಲಒಡವೆ ಬಟ್ಟೆಗಳನ್ನು ಒಂದು ಕಾವಡಿಯಲ್ಲಿರಿಸಿ ಹೊರಿಸಿಕೊಂಡು ಗುಣಸುಂದರಿ ಇರುವ ಕೊರಚರಪಾಳ್ಯಕ್ಕೆ ಹೊರಟಳು.

ದಾದಿ ಮೀನಾದೇವಿ ತನ್ನ ಸ್ಥಿತಿಯನ್ನು ಕುರಿತು ಎಲ್ಲಿ ಸಂತಾಪಪಡುವಳೋ ಎಂದು ಗುಣಸುಂದರಿ ಇಲ್ಲದ ಸಂತೋಷವನ್ನು ತಂದುಕೊಂಡು ತಂದೆಯ ಕ್ಷೇಮಸಮಾಚಾರವನ್ನು ಕೇಳಿದಳು.

ಆಕೆ ತಂದ ವಸ್ತುಗಳನ್ನು ಕಂಡು "ಇವೆಲ್ಲವೂ ಏನು? ರಾಜನ ಸೊತ್ತು ಒಂದು ಕಡ್ಡಿಯಾದರೂ ನನಗೆ ಹಿಡಿಸುವುದಿಲ್ಲ. ಇವನ್ನೆಲ್ಲಾ ಹಿಂದಕ್ಕೆ ತೆಗೆದುಕೊಂಡು ಹೋಗಬೇಕು" ಎಂದ ದೈವಾಧೀನ. ಆಗ ಮೀನಾದೇವಿ "ಹೋಗಲಿ, ಬಿಡಿ. ಇವೆರಡನ್ನಾದರೂ ಸ್ವೀಕರಿಸಿ" ಎಂದು ಬಹಳ ಬೇಡಿಕೊಂಡು ವಿಗ್ರಹ ಮತ್ತು ಪುಸ್ತಕವನ್ನು ಬೇರೆಯಾಗಿ ತೆಗೆದಿಟ್ಟಳು. ದೈವಾಧೀನ ಹೆಂಡತಿಯ ಕಡೆ





ಕೀಟಲೆಯಿಂದ ನೋಡುತ್ತಾ "ಅಜ್ಜಿ ಇವನ್ನು ನಮಗೆ ಗಂಟು ಹಾಕುತ್ತಿದ್ದಾಳೆ. ಇರಲಿ ಬಿಡು" ಎಂದು ನಕ್ಕನು. ಇವುಗಳನ್ನಾದರೂ ಅಂಗೀಕರಿಸಿದಕ್ಕೆ ಸಂತೋಷಗೊಂಡು ಮಿಕ್ಕ ವಸ್ತುಗಳನ್ನು ಹೊರಿಸಿಕೊಂಡು ಮರಳಿದಳು ಮೀನಾದೇವಿ.

ಇತ್ತ ದೈವಾಧೀನನು ಮುದುಕನಂತೆ ತೋರಿದರೂ, ಯುವಕರನ್ನು ಮೀರಿದ ಪ್ರಜ್ಞಾ ವಿಶೇಷಗಳನ್ನು ಪ್ರದರ್ಶಿಸುತ್ತಲಿದ್ದ. ಇದಕ್ಕೆ ಪಾಳ್ಯದ ಪ್ರಜೆಗಳ ಆನಂದ ಸಂಭ್ರಮಕ್ಕೆ ಎಣೆಯಿಲ್ಲ. ಎಲ್ಲರೂ ಆತನಿಗೆ ಜಯಕಾರ ಮಾಡುತ್ತಿದ್ದರು. ಆತನ ಕೈಯಲ್ಲಿ ಆಗದ ಕೆಲಸವಿಲ್ಲ. ಚಿತ್ರಗಳನ್ನು ಬರೆಯಬಲ್ಲ. ಸಂಗೀತ ಹಾಡಬಲ್ಲ, ನಾಟ್ಯಮಾಡಬಲ್ಲ. ಹೀಗೆ ದಿನದಿನಕ್ಕೆ ತಿಳುವಳಿಕೆಯಿಂದ ಪ್ರಸನ್ನನಾಗುತ್ತಾ ಗುಣಸುಂದರಿಗೂ, ಪಾಳ್ಯದ ಪ್ರಜೆಗಳಿಗೂ ಆಶ್ಚರ್ಯವನ್ನುಂಟುಮಾಡುತ್ತಿದ್ದ. ಇದೆಲ್ಲವನ್ನೂ ನೋಡಿ, ಆಕೆ ತನ್ನ ಗಂಡನು ಬಹಳ ಪ್ರತಿಭಾವಂತನೆಂದೂ ಆತನ ರಹಸ್ಯವನ್ನು ಕಂಡು ಹಿಡಿಯಬೇಕೆಂದೂ ಉತ್ಸಾಹದಿಂದ ಇದ್ದಳು.

ಅಲ್ಲಿ ಹಾಸಿಗೆ ಹಿಡಿದ ಮಹಾರಾಜನು ಯಮಯಾತನೆ ಪಡುತ್ತಿದ್ದ. ಕುವರಿಯರೂ, ಅಳಿಯಂದಿರೂ ಸದಾ ತನ್ನ ಎದುರಿಗೇ ಇರಬೇಕೆನ್ನುವನು. ಅವರು ತಮ್ಮ ಆನಂದವನ್ನು ಬಿಟ್ಟು ಯಾವಾಗಲೂ ಉಪಚಾರ ಮಾಡುವರೇ? ಮಾಡಿದರೂ ಎಷ್ಟು ದಿನ? ತಂದೆಯೇ ಸರ್ವಸ್ವವೆಂದು ಅಂದು ಸಭೆಯಲ್ಲಿ ನುಡಿದ ಹಿರಿಯ ಕುವರಿಯರಿಬ್ಬರೂ ತಂದೆಯ ಮೇಲೆ ದಯದಾಕ್ಷಿಣ್ಯವಿಲ್ಲದೆ ರಾಜ್ಯವು ಎಂದು ತಮಗೆ ಬರುವುದೋ ಎಂದು ಎದುರು ನೋಡುತ್ತಿದ್ದರು.

ಮಹಾರಾಜನಿಗೆ ದಿವಸದಿವಸಕ್ಕೆ ವ್ಯಾಧಿ ಪ್ರಬಲಿಸುತಿತ್ತು. ಶಸ್ತ್ರಚಿಕಿತ್ಸೆ ಮಾಡಿದ ಹೊರತು ಜೀವಿಸಲಾರನೆಂದು ಆಸ್ಥಾನ ವೈದ್ಯನು ಹೇಳಿದನು. ಬಲವಂತವಾಗಿಯಾದರೂ ಶಸ್ತ್ರಚಿಕಿತ್ಸೆ ಮಾಡುವಂತೆ ಹೇಳಿದರು ರೂಪ ಹೇಮರು. ಮಕ್ಕಳನ್ನು ನೋಡಿ "ಇದೇಯೇ ನಿಮ್ಮ ಪ್ರೇಮ. ಕಣ್ಣೆದುರಿಗೆ ನನ್ನ ಮಾಂಸಖಂಡವನ್ನು ಛೇದಿಸುವಿರಾ" ಎಂದು ಮಹಾರಾಜನು ಗೋಗರೆದ.

[ಮುಂದು ವರಿಯುತ್ತೆ]






ಪೂರ್ವದಲ್ಲಿ ಗಂಗಾ ನದಿಯ ದಡದಲ್ಲಿ ಒಬ್ಬ ಋಷಿ ತಪಸ್ಸು ಮಾಡುತ್ತಾ ಇರುತ್ತಿದ್ದ. ಆತನಿಗೆ ಒಬ್ಬ ಶಿಷ್ಯ. ಅವನಿಗೆ ಗುರುವಿನಲ್ಲಿ ತುಂಬಾ ಭಕ್ತಿ. ಗುರುವಿಗೂ ಸಹ ಶಿಷ್ಯನ ಮೇಲೆ ತುಂಬಾ ವಾತ್ಸಲ್ಯ. ಆದುದರಿಂದ ಬಹಳ ಶ್ರದ್ಧೆಯಿಂದ ವಿದ್ಯೆ ಕಲಿಸುತ್ತಿದ್ದ ಶಿಷ್ಯನಿಗೆ.

ಒಂದುದಿನ ಆ ಋಷಿ ಶಿಷ್ಯನನ್ನು ಕರೆದು "ಶಿಷ್ಯನೇ, ನಾನು ಈ ಜನ್ಮವನ್ನು ಬಿಡಬೇಕಾದ ಕಾಲ ಸಮೀಪಿಸಿದೆ" ಎಂದ. ಆ ಮಾತುಗಳನ್ನು ಕೇಳಿ ಶಿಷ್ಯನು ಬೆಚ್ಚಿ ಬಿದ್ದು "ಇದೇನು ಗುರುಗಳೇ, ಆಗಲೇ ನನ್ನನ್ನು ಬಿಟ್ಟು ಹೊರಟು ಹೋಗುವಿರಾ ? ನಿಮ್ಮೊಂದಿಗೆ ನನಗೂ ಮೋಕ್ಷ ಉಂಟಾಗುವ ಉಪಾಯ ಹೇಳಿ" ಎಂದು ಕೇಳಿಕೊಂಡ.

ಅದಕ್ಕೆ ಮುನೀಶ್ವರನು "ಅಪ್ಪಾ, ನನಗೆ ಮೋಕ್ಷ ಸಿಕ್ಕುತ್ತಿಲ್ಲ. ನಾನೀ ಜನ್ಮದಲ್ಲಿ ಘೋರ ಪಾಪ ಒಂದನ್ನು ಮಾಡಿರುವೆನು. ಆ ಮಹಾಪಾಪದ ಫಲವಾಗಿ ನಾನು ಮತ್ತೆ ಜನ್ಮ ತಾಳಬೇಕು. ನರಜನ್ಮವಲ್ಲ, ಹಂದಿಯ ಜನ್ಮ!" ಎಂದ.

ಈ ಮಾತು ಕೇಳಿ ಶಿಷ್ಯ ದಂಗುಬಡಿದವನಂತೆ ನಿಂತು ಬಿಟ್ಟ.

ಆಗ ಋಷಿ "ನೀನೂ, ನಾನೂ ವಿಚಾರಪಟ್ಟು ಲಾಭವಿಲ್ಲ. ಯಾರಾದರೂ ಸರಿ. ಮಾಡಿದ ಪಾಪಕ್ಕೆ ಫಲವನ್ನು ಅನುಭವಿಸಬೇಕು. ಹಂದಿಯ ಉದರದಲ್ಲಿ ನಾನು ಜನಿಸುವುದು ತಪ್ಪಿದ್ದಲ್ಲ. ಹುಟ್ಟುವೆನು. ಆದರೆ ಆ ನಿಕೃಷ್ಟಜನ್ಮದಲ್ಲಿ ಒಂದು ಕ್ಷಣವಾದರೂ ಇರಲು ನನಗೆ ಇಷ್ಟವಿಲ್ಲ. ಆ ಜನ್ಮವನ್ನು ಶೀಘ್ರವಾಗಿ ತೊರೆಯಲು ನೀನು ನನಗೆ ಸಹಾಯಮಾಡಬೇಕು.'' ಎಂದ.

"ತಾವು ಹೇಳಿದಂತೆ ಮಾಡುವೆನು" ಎಂದ ಶಿಷ್ಯ.

ಹಾಗಾದರೆ ಕೇಳು. ಅದೋ, ನೋಡು. ಅಲ್ಲಿ ಕಾಣಿಸುವ ಹಳ್ಳಿಯಲ್ಲಿ ಒಬ್ಬ ಕೊರಮನಿದ್ದಾನೆ. ಅವನ ಮನೆಯ:ಲ್ಲಿ ಒಂದು ಹಂದಿ ಇದೆ. ಆ ಹಂದಿಗೆ ಹುಟ್ಟುವ ಮರಿಗಳಲ್ಲಿ

ಎಂ. ಟಿ. ಜಾನಕಿ, ಬೆಂಗಳೂರು



ಅದಕ್ಕೆ ಗುರುಗಳು "ಅಪ್ಪಾ, ನೀನು ಹಿಂದೇಟು ಹಾಕಕೂಡದು. ಯಾಕೆಂದರೆ ಈ ಕೆಲಸ ನನ್ನ ಉಪಕಾರಕ್ಕಾಗಿ ಮಾಡುವೆಯಾದ್ದರಿಂದ ಅದು ಹಿಂಸೆ ಆಗಲಾರದು." ಎಂದು ಹೇಳಿ ಶಿಷ್ಯನನ್ನು ಒಪ್ಪಿಸಿದ.

ಹೀಗೆ ಹೇಳಿ ಮುನಿಯು ಪ್ರಾಣ ಬಿಟ್ಟ. ಆತನು ಹೇಳಿದಂತೆಯೇ ಆ ಕೊರಮನ ಮನೆಯಲ್ಲಿದ್ದ ಹಂದಿಯ ಹೊಟ್ಟೆಯಲ್ಲಿ ಪ್ರವೇಶಿಸಿ ಬೆಳೆಯುತಿದ್ದ. ಶಿಷ್ಯನು ಪ್ರತಿದಿನ ಕೊರಮನ ಮನೆಗೆ ಹೋಗಿ ಅವನನ್ನು ಆಶೀರ್ವದಿಸಿ ಬರುತಿದ್ದ.

"ಸೋಮಿಗಳು ದಿನಾಬಂದು ನನಗೆ ಆಶೀರ್ವಾದ ಮಾಡಿ ಹೋಗುತ್ತಿರುವರು. ಏಕಿರಬಹುದು" ಎಂದು ಅವನು ಯೋಚಿಸಿದ. ಒಂದು ದಿನ "ಕಷ್ಟಾನಾದ್ರೂನೂ ದಿನಾ ನಂ ಮನೆಗೆ ತಾವ ಯಾಕೆ ಬರ್‍ತೀರಿ, ಬುದ್ದೇರಾ! ನಿಂಗೆ ನನ್ನಿಂದೇನಾದ್ರೂ ಕೆಲ್ಸ ಐತಾ" ಎಂದು ಶಿಷ್ಯನನ್ನು ಕೇಳಿದ, ಆ ಕೊರಮ.

ಕೇಳಿದಕೂಡಲೇ ಶಿಷ್ಯ "ನಿನ್ನಿಂದ ಒಂದು ಉಪಕಾರವಾಗಬೇಕಾಗಿದೆ. ಅದರಿಂದಲೇ ನಾನು ದಿನಾ ನಿನ್ನ ಹತ್ತಿರ ಬರುತ್ತಿದ್ದೇನೆ. ಇನ್ನೇನಿಲ್ಲ. ನಿನ್ನ ಮನೆಯಲ್ಲಿ ಗರ್ಭಿಣಿ ಹಂದಿ ಇದೆಯಲ್ಲವೇ? ಅದು ಮರಿ ಹಾಕುವವರೆವಿಗೂ ಅವನ್ನು ನಮ್ಮ ಮನೆಯಲ್ಲಿ ಕಟ್ಟಿ ಹಾಕಬೇಕು. ಅದರ ಮರಿಗಳಲ್ಲಿ ಒಂದನ್ನು

ನಾನೊಂದಾಗಿ ಹುಟ್ಟುವೆನು. ಆ ಮರಿಗಳಲ್ಲಿ ಒಂದಕ್ಕೆ ಮುಖದಮೇಲೊಂದು ಮಚ್ಚೆ ಕಾಣಿಸುತ್ತದೆ. ಆ ಮಚ್ಚೆ ಇರುವ ಮರಿ ನಾನೇ ಎಂದು ತಿಳಿ. ನಾನು ಜನಿಸಿದ ಕೂಡಲೇ ನೀನು ಯಾವವಿಧವಾದ ಸಂದೇಹವನ್ನೂ ಇಟ್ಟುಕೊಳ್ಳದೆ ನನ್ನನ್ನು ಕೊಂದು ಬಿಡು. ಈವಿಧವಾಗಿ ನನ್ನ ಜನ್ಮವು ಬೇಗ ಮುಗಿಯುವುದು." ಎಂದ ಗುರು.

ಆ ಮಾತು ಕೇಳಿ ಶಿಷ್ಯನ ಕಣ್ಣಲ್ಲಿ ನೀರು ತುಂಬಿತು.

"ಮಹಾತ್ಮರೇ ಯಾವರೂಪದಲ್ಲಿದ್ದರೂ, ನೀವು ನನಗೆ ಗುರುಗಳೇ! ನಿಮ್ಮನ್ನು ಕೈಯಾರ ಹೇಗೆ ಕೊಲ್ಲಲಿ? ನಾನು ಹಾಗೆ ಎಂದೂ ಮಾಡಲಾರೆ" ಎಂದು ಗೋಳಾಡಿದ.

ನಾನು ತೆಗೆದುಕೊಂಡು ಮಾರಮ್ಮನಿಗೆ ಬಲಿ ಕೊಡುವೆನು. ಆಮೇಲೆ ಮಿಕ್ಕ ಮರಿಗಳನ್ನೂ, ತಾಯಿಯನ್ನೂ ನೀನು ಸಾಗಿಸಿಕೊಂಡು ಹೋಗಬಹುದು" ಎಂದ.

"ಉಶ್ ಇಷ್ಟೇಯೇ? ಈಪಾಟಿ ಕೆಲಸಕ್ಕೆ ದಿನಾಲೂ ನೀವು ಬರಬೇಕೇ ನಂ ಮನೇ ತಾವ? ಒಂದು ಮಾತು ಹೇಳಿ ಕಳ್ಸಿದ್ದರೆ ನಾನೇ ಬರ್ತಿದ್ದೆನಲ್ಲಾ" ಎಂದು ಹೇಳಿ ಹಂದಿಯನ್ನು ಓಡಿಸಿಕೊಂಡು ಹೋಗಿ ಬ್ರಹ್ಮಚಾರಿಯ ಮನೆ ಹಿತ್ತಲಲ್ಲಿ ಬಿಟ್ಟು ಬಂದ.




* * *

ಕೆಲ ದಿನಗಳು ಕಳೆದ ತರುವಾಯ ಆ ಹಂದಿ ಮರಿಗಳನ್ನು ಹಾಕಿತು. ಅವುಗಳಲ್ಲಿ ಒಂದಕ್ಕೆ ಮೋರೆಯ ಮೇಲೆ ಬಿಳಿಯ ಮಚ್ಚೆ ಇತ್ತು. ಆ ಮರಿಯು ಭೂಮಿಯ ಮೇಲೆ ಬಿದ್ದುದೇ ತಡ ಗುರುವಿನ ಆಜ್ಞೆಪ್ರಕಾರ ಅದನ್ನು ಕೊಲ್ಲಲು ಶಿಷ್ಯನು ದೊಣ್ಣೆಯನ್ನು ಮೇಲಕ್ಕೆ ಎತ್ತಿದ.

ಆದರೆ ಇನ್ನೂ ಕಣ್ಣು ತೆರೆಯದ ಆ ಮರಿಯನ್ನು ನೋಡಿದಕೂಡಲೇ ಆ ಬ್ರಾಹ್ಮಣ ಯುವಕನಿಗೆ ಮರುಕ ವುಂಟಾಯಿತು. 'ಇದನ್ನು ಹೇಗೆ ಕೊಲ್ಲಲಿ?' ಎಂದು ಮನಸ್ಸು ಹಿಂತೆಗೆಯಿತು. ಸ್ವಲ್ಪ ಹೊತ್ತು ಹಾಗೇ ನೋಡುತ್ತಾ ನಿಂತುಬಿಟ್ಟ.

ಅಷ್ಟರಲ್ಲಿ 'ನೀನು ಹಿಂದೇಟು ಹಾಕಕೂಡದು ಕಂಡೆಯಾ?' ಎಂದು ಗುರುಗಳು ಆ ದಿನ ಹೇಳಿದ ಮಾತುಗಳು ಜ್ಞಾಪಕಕ್ಕೆ ಬಂತು. ಸಂಶಯಪಡಕೂಡದೆಂದು ಆ ಹಂದಿಯ ಮರಿಯನ್ನು ಹೊಡೆಯಲು ಉದ್ಯುಕ್ತನಾದ. ಆಗ ಅದು ಕಣ್ಣು ತೆರೆದು "ನಿಲ್ಲು, ನಿಲ್ಲು. ಕೊಲ್ಲಬೇಡ" ಎಂದು ಮನುಷ್ಯನ ಧ್ವನಿಯಲ್ಲಿ ಕಿರಿಚಿತು. ಆ ವಟುವು ಹಾಗೇ ನಿಂತುಬಿಟ್ಟ.

ಆಗ ಆ ಹಂದಿಯ ರೂಪದಲಿದ್ದ ಗುರು, ಶಿಷ್ಯನಿಗೆ "ಅಯ್ಯಾ, ನಾನು ಭೂಮಿಯ ಮೇಲೆ ಬಿದ್ದ ತಕ್ಷಣನನ್ನನ್ನು ನೀನು ಕೊಲ್ಲದೆ ಸುಮ್ಮನಿದ್ದೆ. ನಾನು ಕಣ್ಣು ತೆರೆದಕೂಡಲೇ ಈ ಶರೀರದಮೇಲೆ ನನಗೆ ಅಭಿಮಾನವುಂ

ಟಾಯಿತು. ಈ ಹಂದಿಯ ಜನ್ಮದಲ್ಲಿದ್ದೂ ಸುಖವನ್ನು ಅನುಭವಿಸಬಹುದೆಂದು ತೋರುತ್ತದೆ. ಆದ್ದರಿಂದ ಈ ಜನ್ಮವನ್ನು ಕೆಲದಿನ ಕಳೆಯುವೆನು. ನೀನೇನು ಚಿಂತಿಸಬೇಡ. ನಿನ್ನ ದಾರಿ ನೀನು ಹೋಗು" ಎಂದ.

ಆ ಮಾತು ಕೇಳಿ ಶಿಷ್ಯನಿಗೆ ಬಹಳ ಆಶ್ಚರ್ಯವಾಯಿತು. ಈ ಜನ್ಮದಲ್ಲಿ ಒಂದು ಕ್ಷಣವಾದರೂ ಜೀವಿಸಲಾರೆನೆಂದ ಗುರುಗಳೇ ಹೀಗೆ ಹೇಳುತ್ತಿರುವರಲ್ಲಾ ಎಂದು. ಆಗ ಕೇಳಿದ: "ಸ್ವಾಮಿ, ಈ ನೀಚಜನ್ಮದಲ್ಲಿ ನಿಮಗೆ ಸಿಕ್ಕುವ ಸುಖವೇನು?" ಎಂದು. ಆ ಪ್ರಶ್ನೆಗೆ ಹಂದಿ ಮರಿ ಹೇಳಿತು: "ಇದು ನೀಚಜನ್ಮವೆಂದು ಮೊದಲು ತಿಳಿದಿದ್ದೆ. ಆದರೆ ಆ ನಿಶ್ಚಯ ಈಗ ಬದಲಾಯಿಸಿತು. ಮನುಷ್ಯನ ಶರೀರದಲ್ಲಿದ್ದರೂ, ಜಂತುವಿನ ಶರೀರದಲ್ಲಿದ್ದರೂ ಪಕ್ಷಿಯ ಶರೀರದಲ್ಲಿದ್ದರೂ, ಇಲ್ಲ ಮತ್ಯಾವ ಶರೀರದಲ್ಲಿದ್ದರೂ ಪ್ರಾಣಿಗಳಿಗೆಲ್ಲಕ್ಕೂ ಸುಖದುಃಖಗಳು ಸಮನಾಗಿರುತ್ತವೆ. ಯಾವ ಜೀವಿಗೂ ತನ್ನ ಜನ್ಮವು ನೀಚವೆನ್ನಿಸದು. ಎಷ್ಟು ಅಲ್ಪಜಂತುವಾದರೂ ಸರಿ, ತನ್ನ ಶರೀರವೆಂದರೆ ಅಭಿಮಾನ ಹುಟ್ಟಿ, ಆ ಶರೀರದಿಂದ ಹೊಂದಬಹುದಾದ ಸುಖಕ್ಕಾಗಿ ಕೃಷಿ ಮಾಡುವುದು. ಯಾವ ಪ್ರಾಣಿಗಾದರೂ ಸಾವೆಂದರೆ ಭಯವುಂಟಾಗಲು ಕಾರಣ ಈ ದೇಹಾಭಿಮಾನ!"

ಶಿಷ್ಯನಿನ್ನೂ ಗುರುಗಳೊಂದಿಗೆ ಏನೋ ಮಾತನಾಡಬೇಕೆಂದಿದ್ದ. ಇನ್ನೆಲ್ಲಿಯ ಗುರು? ಆ ಹಂದಿ ಮರಿಗೆ ಮರುಕ್ಷಣವೇ ತನ್ನ ಪೂರ್ವಜನ್ಮದಲ್ಲಿ ಋಷಿಯಾಗಿದ್ದೆನೆಂಬ ಜ್ಞಾನ ಕಳೆದು ಆ ಹಂದಿ ಜನ್ಮದಲ್ಲಿ ಉಂಟಾಗುವ ಕಷ್ಟಸುಖಗಳ ಅನುಭವ ಪ್ರಾರಂಭವಾಯಿತು. ಆ ಹಂದಿ ಮರಿ ಮಿಕ್ಕ ಮರಿಗಳೊಂದಿಗೆ ತಾಯಿಯ ಹತ್ತಿರ ಹೋಗಿ ಮೊಲೆಯುಣ್ಣಲು ನೊದಲುಮಾಡಿತು.

"ಕರ್ಮಫಲವನ್ನು ಯಾರೂ ತಪ್ಪಿಸಲಾರರು" ಎಂದುಕೊಂಡ ಆ ಶಿಷ್ಯ ಕೊರಮನನ್ನು ಬರಮಾಡಿಕೊಂಡು ಹಂದಿ ಮತ್ತು ಅದರ ಮರಿಗಳನ್ನು ಅಟ್ಟಿಕೊಂಡು ಹೋಗುವಂತೆ ಹೇಳಿದ.






ಪೂರ್ವಕಾಲದಲ್ಲಿ ಪದ್ಮ ಎಂಬ ಹುಡುಗಿ ಇದ್ದಳು. ಅವಳಿಗೆ ತಮ್ಮನೊಬ್ಬನಿದ್ದನು. ಚಿಕ್ಕಂದಿನಲ್ಲೇ ತಂದೆ ತಾಯಿಗಳು ತೀರಿ ಹೋದುದರಿಂದ ಅವರು ದಿಕ್ಕಿಲ್ಲದ ಅನಾಥರಾದರು.

ಅದ್ದರಿಂದ ಯಾವುದಾದರೂ ದೇಶಕ್ಕೆ ಹೋಗಿ ಸುಖವಾಗಿ ಜೀವಿಸೋಣವೆಂಬ ಆಶೆಯಿಂದ ಅವರು ಭೂಲೋಕವನ್ನು ಸುತ್ತಿ ನೋಡಲು ಹೊರಟರು.

ದಾರಿಯಲ್ಲಿ ಹುಡುಗನಿಗೆ ಬಾಯಾರಿಕೆ ಆಯಿತು. ನೀರು ಬೇಕೆಂದು ಅತ್ತ. "ತಮ್ಮಾ ಇನ್ನು ಸ್ವಲ್ಪದೂರದಲ್ಲಿ ಬಾವಿ ಸಿಗುತ್ತದೆ. ಅಲ್ಲಿ ಕುಡಿಯುವೆಯಂತೆ ಅಳಬೇಡ" ಎಂದು ಪದ್ಮ ಸಮಾಧಾನ ಮಾಡಿದಳು.

ಇಷ್ಟರಲ್ಲಿ ಆ ಹುಡುಗನಿಗೆ ಒಂದು ಕುದುರೆ ಗೊರಸಿನ ಗುರುತೂ, ಅದರಲ್ಲಿ ನೀರೂ ಕಾಣಿಸಿತು. "ಅಕ್ಕ, ಅಕ್ಕ! ಇದರಲ್ಲಿರುವ ನೀರನ್ನು ಕುಡಿದು ಬಾಯಾರಿಕೆ ತೀರಿಸಿಕೊಳ್ಳುವೆನು" ಎಂದ. "ಬೇಡ, ತಮ್ಮಾ, ಅದು ಕುಡಿದೆಯೆಂದರೆ ಕುದುರೆ ಮರಿಯ ರೂಪ ಹೊಂದುವೆ" ಎಂದು ಹೇಳಿ ತಡೆದಳು.

ಇನ್ನಷ್ಟುದೂರ ಹೋಗುವಲ್ಲಿ ಹುಡುಗನಿಗೆ ಹಸುವಿನ ಗೊರಸಿನ ಗುರುತು. ಅದರಲ್ಲಿ ನೀರೂ ಕಾಣಿಸಿತು. "ಇದಾದರೂ ಕುಡಿಯುತ್ತೇನೆ" ಎಂದು ಅಕ್ಕನೊಂದಿಗೆ ಹೇಳಲು ಆಗಲೂ ಬೇಡವೆಂದಳು.

ಮತ್ತಷ್ಟುದೂರ ಹೋದರೆ ಅಲ್ಲಿ ಕುರಿಯ ಗೊರಸಿನ ಗುರುತೂ, ಅದರಲ್ಲಿ ನೀರೂ ಕಾಣಿಸಿತು. ಬಾಯಾರಿಕೆಗೆ ತಾಳಲಾರದೆ ಈಸಾರಿ ಅಕ್ಕನಿಗೆ ಹೇಳದೆ ಕೇಳದೆ ಕುರಿಯ ಗೊರಸಿನ ಹಾಗಿದ್ದ ಕುಂಟೆಯಲ್ಲಿನ ನೀರನ್ನು ಕುಡಿದುಬಿಟ್ಟ.

ಆ ನೀರು ಬಾಯಿಗೆ ತಾಕಿದಕೂಡಲೇ ತಮ್ಮನು ಕುರಿಮರಿಯಾಗಿ ಬಾಲ ಆಡಿಸುತ್ತಾ ಜಿಗಿದಾಡಲು ಪ್ರಾರಂಭಿಸಿದ. ಪದ್ಮ ತನ್ನ ತಮ್ಮನಿಗಾಗಿ ಹುಡುಕಾಡಿದಳು. ಇಷ್ಟರಲ್ಲಿ ತನ್ನಸುತ್ತಲೂ ಓಡಾಡುತ್ತಾ ತನ್ನನ್ನು ಪ್ರೀತಿಯಿಂದ ನೆಕ್ಕಲು ಬಂದ ಮುದ್ದಾದ ಕುರಿಮರಿಯನ್ನು ನೋಡಿದಳು. ಆ ಸಮೀಪ

ಗುಂಡೂ ರಾವ್, ಉಡಿಪಿ





ನಿನ್ನ ಕೋರಿಕೆಗಳನ್ನೆಲ್ಲಾ ನೆರವೇರಿಸುವೆನು. ನಿನ್ನ ತಮ್ಮನನ್ನು ಜಾಗರೂಕತೆಯಿಂದ ಕಾಪಾಡುವ ಭಾರ ನನ್ನದು" ಎಂದು ಧೈರ್ಯ ಹೇಳಿದ.

ಕುರಿಮರಿಯನ್ನು ಸಂಗಡ ಕರೆದು ಕೊಂಡು ಪದ್ಮ ಆ ರಾಜನೊಂದಿಗೆ ಹೊರಟು ಹೋದಳು. ಆತನು ಪದ್ಮಳನ್ನು ತನ್ನ ರಾಣಿಯನ್ನಾಗಿ ಮಾಡಿ, ಎಷ್ಟೋ ಆದರಾಭಿ ಮಾನಗಳಿಂದ ನೋಡಿಕೊಳ್ಳುತ್ತಿದ್ದ.

ಹೀಗೇ ಇರುವಲ್ಲಿ ಪದ್ಮಳು ಸುಖದಿಂದ ಹಾಯಾಗಿರುವ ಸಮಾಚಾರ ಒಂದು ಕಣ್ಣಿನ ರಾಕ್ಷಸಿಗೆ ಹೇಗೋ ತಿಳಿಯಿತು. ಯಾರಾ ದರೂ ಸುಖವಾಗಿದ್ದರೆ ಅವರನ್ನು ನಾಶ ಮಾಡುವುದೇ ಆ ರಾಕ್ಷಸಿಯ ಕೆಲಸ.

ಒಂದುದಿನ ರಾಜ ತನ್ನ ಪ್ರಿಯತಮಳಿಗೆ ಅಪರೂಪವಾದ ವಸ್ತು ಒಂದನ್ನು ತರುವ ಉದ್ದೇಶದಿಂದ ರಾಜ್ಯದಿಂದ ಹೊರಗೆ ಹೋದ. ಸಮಯ ಕಾದುಕೊಂಡಿದ್ದ ರಾಕ್ಷಸಿ ಮುದುಕಿಯಂತೆ ಪದ್ಮಳ ಹತ್ತಿರಬಂದು "ಹೊಟ್ಟೆ ಹಸಿಯುತ್ತದೆ. ಅಷ್ಟು ಕವಳ ಹಾಕು ಮಹಾತಾಯಿ". ಎಂದು ಕೇಳಿ ಕೊಂಡಳು. ಕರುಣೆಯಿಂದ ಪದ್ಮ ಅವಳಿಗೆ ಊಟ ಇಡಿಸಿದಳು. ಕೂತಿದ್ದಂತೆಯೇ ರಾಕ್ಷಸಿ, ಪದ್ಮ ಉಪಯೋಗಿಸುವ ನೀರಿನ ಪಾತ್ರೆಯಲ್ಲಿ ಆಕೆಗೆ ಕಾಣಿಸದಂತೆ ವಿಷ ಕಲಸಿಬಿಟ್ಟಳು. ಆ ನೀರು ಕುಡಿದ ಕೂಡಲೇ ಪದ್ಮಳಿಗೆ ಹಠಾತ್ತಾಗಿ ಕಾಯಿಲೆಯಾಗಿ

ದಲ್ಲೇ ಇದ್ದ ಕುರಿಗೊರಸಿನ ಗುರುತೂ ಅದ ರಲ್ಲಿ ನೀರೂ, ಪದ್ಮಳಿಗೆ ಕಾಣಿಸಿತು. ಇದನ್ನು ನೋಡಿ ಆಗಿ ಹೋದ ಪ್ರಮಾದವನ್ನು ಅರಿ ತಳು. ಮಾಡುವುದಾದರೂ ಏನು? ಬಿಕ್ಕಿ ಬಿಕ್ಕಿ ಅಳುತ್ತಾ ಅಲ್ಲೇ ಕುಳಿತುಬಿಟ್ಟಳು. ಆಕೆಯ ಪಕ್ಕದಲ್ಲೇ ಕುರಿಮರಿ ಕತ್ತು ಬಗ್ಗಿಸಿ ಕೊಂಡು ನಿಂತಿತು.

ಸ್ವಲ್ಪಹೊತ್ತಿಗೆ ಅಲ್ಲಿಗೊಬ್ಬ ರಾಜ ಬಂದ. ಅಳುತ್ತಿದ್ದ ಪದ್ಮಳನ್ನು ಮಾತನಾಡಿಸಿದ. ಆಕೆ ತನ್ನ ವಿಷಯವನ್ನೂ, ಕುರಿಮರಿಯ ಹಾಗೆ ಬದಲಾಯಿಸಿದ ತನ್ನ ತಮ್ಮನ ವಿಷಯ ವನ್ನೂ ಆತನೊಂದಿಗೆ ಹೇಳಿದಳು. ಆಗ ರಾಜ "ನಿನಗೇನೂ ಭಯವಿಲ್ಲ. ನನ್ನನ್ನು ಮದುವೆ ಆಗಿ ನನ್ನೊಂದಿಗೆ ಇದ್ದು ಬಿಡು.



ಗಂಡನು ಬರುವಮುನ್ನ ಕಡ್ಡಿಯಂತೆ ಕೃಶಳಾಗಿ ನಿಶ್ಚೇತನಳಾಗಿ ಬಿದ್ದುಕೊಂಡಳು.

ಮಾರನೇದಿನ ರಾಕ್ಷಸಿ ಒಬ್ಬ ವೈದ್ಯಳ ರೂಪದಲ್ಲಿ ಬಂದು ಪದ್ಮಳ ಸ್ಥಿತಿ ನೋಡಿ ಮರುಕ ಗೊಂಡವಳಂತೆ ನಟಿಸಿ, ತಾನು ಕೊಟ್ಟ ಔಷಧಿಯನ್ನು ಲೇಪಿಸಿಕೊಂಡು ಕೊಳದಲ್ಲಿ ಮಿಂದರೆ ಯಥಾಪ್ರಕಾರ ರೂಪು ಬರುವುದೆಂದು ಹೇಳಿದಳು.

ಏನೂ ಅರಿಯದ ಪದ್ಮ ಆಪ್ರಕಾರವೇ ಮರುದಿನ ಕೊಳಕ್ಕೆ ಹೋದಳು. ಧೂರ್ತಳಾದ ರಾಕ್ಷಸಿ ಪದ್ಮಳ ಬಟ್ಟೆಬರೆಗಳನ್ನು ತಾನು ತೆಗೆದುಕೊಂಡು ಆಕೆಯನ್ನು ಕೊಳದಲ್ಲಿ ಇಳಿದು ಸ್ನಾನಮಾಡುವಂತೆ ಹೇಳಿದಳು. ಪದ್ಮ ಸ್ನಾನಮಾಡುತ್ತಿರುವಾಗ ರಾಕ್ಷಸಿ ಪದ್ಮಳ ಕೊರಳಿಗೆ ಬಂದು ದೊಡ್ಡ ಕಲ್ಲು ಬಂಡೆಯನ್ನು ನೇತು ಹಾಕಿ, ಆಕೆಯನ್ನು ಕೊಳದಲ್ಲಿ ಮುಳುಗಿಸಿಬಿಟ್ಟಳು. ರಕ್ಕಸಿಯ ಚರ್ಯೆಗಳನ್ನೆಲ್ಲಾ ಪದ್ಮಳ ಸಂಗಡ ಬಂದಿದ್ದ ಕುರಿಮರಿ ನೋಡುತ್ತಲೇ ಇತ್ತು.

ರಕ್ಕಸಿಯ ಕೈಯಲ್ಲಿ ಪದ್ಮಳ ಬಟ್ಟೆಗಳಿದ್ದಿತಲ್ಲವೇ? ಪದ್ಮ ಕೊಳದಡಿ ಸೇರಿದಳು. ಸಮಯವನ್ನು ಸಾಧಿಸಿ ರಕ್ಕಸಿಯು ಆ ಬಟ್ಟೆಗಳನ್ನು ತಾನು ತೊಟ್ಟುಕೊಂಡು ತನ್ನ ಮಂತ್ರಶಕ್ತಿಯಿಂದ ಪದ್ಮಳಹಾಗೇ, ತಯಾರಾಗಿ ಅರಮನೆಗೆ ಹೋಗಿ ಮಾಮೂಲು ರಾಣಿಯಂತೆ ಕೆಲಸ ಕಾರ್ಯಗಳಲ್ಲಿ ತೊಡಗಿದಳು. ಸಾಯಂಕಾಲ ರಾಜ ಮನೆಗೆ ಬಂದ. ಎಂದಿನಂತೆ ತನ್ನ ಪತ್ನಿಉಲ್ಲಾಸದಿಂದಿರುವುದನ್ನು ನೋಡಿ ಸಂತೋಷಪಟ್ಟ. ಕುರಿಮರಿ ಮಾತ್ರ ಪ್ರತಿದಿನ ಬೆಳಗ್ಗೆ ಮತ್ತು ಸಾಯಂಕಾಲ ಕೊಳದಹತ್ತಿರ ಹೋಗಿ "ಬ್ಯಾ! ಬ್ಯಾ!!" ಎಂದು ವ್ಯಾಕುಲದಿಂದ ಅರುಚುತಿತ್ತು.

ಕುರಿಮರಿ ಹೀಗೆ ಕೊಳದ ಹತ್ತಿರ ಹೋಗುವುದನ್ನು ಕಂಡು ರಕ್ಕಸಿ ತನ್ನ ಗುಟ್ಟು ಎಲ್ಲಿ ಬಯಲಾಗುವುದೋ ಎಂದು ಭಯಪಟ್ಟಳು. ಹೇಗಾದರೂ ಇದನ್ನು ಕೊಲ್ಲಿಸಿಬಿಟ್ಟರೆ ಪೀಡೆ ತೊಲಗುವುದೆಂದುಕೊಂಡು ಅಡಿಗೆಯವನನ್ನು ಕರೆಸಿದಳು. ಅವನಿಗೆ ಕುರಿಯ ಮರಿಯನ್ನು ಕೊಂದು ಅಡಿಗೆ

ಮಾಡುವಂತೆ ಆಜ್ಞೆ ಮಾಡಿದಳು. ಈ ಮಾತುಗಳನ್ನು ಕೇಳಿ ರಾಜ ಚಕಿತನಾದ. "ಕುರಿಮರಿ ನಿನ್ನ ನೆಚ್ಚಿನ ತಮ್ಮನಲ್ಲವೆ? ತಮ್ಮನನ್ನು ಕೊಲ್ಲಿಸುವುದೇ?" ಎಂದ.

ಅದಕ್ಕೆ ಸದುತ್ತರ ಕೊಡಲಾರದಾದಳು ರಕ್ಕಸಿ "ತಮ್ಮನೋ ಗಿಮ್ಮನೋ! ನನಗೆ ಹಾಗೆ ಬುದ್ಧಿ ಹುಟ್ಟಿತು. ಆದ್ದರಿಂದ ಅದನ್ನು ಅಡಿಗೆ ಮಾಡಿಸಿಯೇ ತೀರಬೇಕು" ಎಂದಳು.

ಈ ಮಾತು ಕೇಳಿದಕೂಡಲೇ ಕುರಿ ಮರಿ ಕೊಳದ ಹತ್ತಿರ ಹೋಗಿ "ಅಕ್ಕಾ! ಪದ್ಮಾ!! ನನ್ನ ಕೊಲ್ಲುವರಂತೆ! ನನ್ನ ಬೇಯಿಸುವರಂತೆ ಕತ್ತಿ ಮಸೆಯುತಿರುವರು ಸಲಾಕಿ ಕಾಯಿಸುತಿರುವರು." ಎಂದು ಹೇಳಿಕೊಂಡು ಅತ್ತಿತು.

ಆಗ ಕೊಳದಡಿಯಿಂದ ಪದ್ಮ ತನ್ನ ವಿಷಯ ಹೇಳಿದಳು. ರಾಣಿಯ ಆಜ್ಞೆ ಪ್ರಕಾರ ಕುರಿಮರಿಯನ್ನು ಹಿಡಿಯಲು ಬಂದ ಭಟನಿಗೆ ಕೊಳದಡಿಯಿಂದ ಬಂದ ಮಾತುಗಳು ಸ್ಪಷ್ಟವಾಗಿ ಕೇಳಿಸಿದವು. ಆತನು ಹೋಗಿ ರಾಜನಿಗೆ ಹೇಳಿದ. ರಾಜನು ಕೊಳದ ಹತ್ತಿರ ಬಂದ. ಕುರಿಮರಿ ಮತ್ತೆ ಅತ್ತಿತು.

ಕೊಳದಡಿಯಿಂದ ಪದ್ಮ ಮತ್ತೆ ಜವಾಬು ಕೊಟ್ಟಳು. ಆ ಮಾತುಗಳು ತನ್ನ ಪದ್ಮಳದೇ ಎಂದು ಕಂಠಸ್ವರದಿಂದ ರಾಜ ಕಂಡುಹಿಡಿದ.

ಕೂಡಲೇ ಮೊಗೇರರನ್ನು ಕರೆಸಿ ರೇಷ್ಮೆಯ ಬಲೆಯನ್ನು ಹಾಕಿ ಹುಡುಕುವಂತೆ ಹೇಳಿದ. ಸ್ವಲ್ಪಹೊತ್ತಿಗೆಲ್ಲಾ ಪದ್ಮ ಆ ಬಲೆಯಲ್ಲಿ ಸಿಕ್ಕಿಕೊಂಡಳು.

ಮೇಲೆ ಬಂದಕೂಡಲೇ ಪದ್ಮ ಕುರಿಮರಿಯನ್ನು ಹತ್ತಿರಕ್ಕೆ ಎಳೆದುಕೊಂಡು ಆಲಂಗಿಸಿದಳು. ಆಕೆ ಮುಟ್ಟಿದಕೂಡಲೆ ನೀರಿನ ಮಹಿಮೆಯಿಂದ ಕುರಿಮರಿಗೆ ತಮ್ಮನ ರೂಪ ಬಂತು.

ರಾಜನು ಅರಮನೆ ಸೇರಿ ಸತ್ಯಾಸತ್ಯಗಳನ್ನು ಕಂಡುಕೊಂಡನು. ರಾಣಿಯ ರೂಪದಲ್ಲಿದ್ದ ರಕ್ಕಸಿಯನ್ನು ಒಂದು ಕಂಬಕ್ಕೆ ಕಟ್ಟಿಸಿ ಊರಿನವರಿಗೆಲ್ಲಾ ಅವಳನ್ನು ಹೊಡೆಯುವಂತೆ ತಿಳಿಸಿದ. ರಾಕ್ಷಸಿ ಸತ್ತಳು.

ಅಂದಿನಿಂದ ಪದ್ಮ ಅವಳ ತಮ್ಮ ಸುಖವಾಗಿದ್ದರು.






ಕಿಟ್ಟು ಅಂತ ಒಬ್ಬ ಹುಡುಗನಿದ್ದ. ಅವನು ನೋಡಲು ಚಿಕ್ಕವನು. ಆದರೆ ಅವನ ಕೆಲಸಗಳೋ, ನೋಡುವವರಿಗೆ ಆಶ್ಚರ್ಯ ಹುಟ್ಟಿಸುತ್ತಿತ್ತು. ಎಲ್ಲಾ ಕೌತುಕಗಳೇ. ಒಂದು ಸಾರಿ ಆತನು ಮೆಣಸಿನ ಬೀಜಗಳನ್ನು ನೆಟ್ಟ. ಆ ಗಿಡಗಳು ಸಿಹಿ ಹಣ್ಣುಗಳನ್ನು ಬಿಟ್ಟವು.

ಕಿಟ್ಟುವನ್ನು ಕಂಡರೆ ಚಿಕ್ಕವರಿಗೆ, ದೊಡ್ಡವರಿಗೆ ಎಲ್ಲರಿಗೂ ಆನಂದ. ಎಲ್ಲರೂ ಆತನನ್ನು ಸಂತೋಷಕ್ಕೆ 'ಕಿಟ್ಟು ಮಾವ, ಕಿಟ್ಟು ಮಾವ' ಅಂತ ಕರೆಯುತ್ತಿದ್ದರು.

ಕಿಟ್ಟು ಮಾವನಿಗೆ ಈ ಕೆಲಸ ಬರುತ್ತದೆ, ಇದು ಇಲ್ಲ ಎಂಬ ಮಾತೇ ಇಲ್ಲ. ಯಾರಿಗೆ ಯಾವ ಕೆಲಸ ಬೇಕಾದರೂ ಮಾಡಿಕೊಡುತ್ತಿದ್ದ. ಯಾರಿಗೂ ಇಲ್ಲ ಎಂದವನೇ ಅಲ್ಲ. ಅಷ್ಟು ಒಳ್ಳೆಯವ ಕಿಟ್ಟು ಮಾವ.

ಎಷ್ಟು ಕೆಲಸಗಳನ್ನು ಮಾಡಿದರೂ ಆತನ ಕೈಯಲ್ಲಿ ಹಣ ಉಳಿಯುತ್ತಿರಲಿಲ್ಲ. ಹಣವಿಲ್ಲದಿದ್ದರೂ ಯಾವಾಗಲೂ ಆನಂದವಾಗಿಯೇ ಇರುತ್ತಿದ್ದ. ಕಿಟ್ಟು ಮಾವನ ಸುತ್ತಲೂ ಸರ್ವದಾ ಮಕ್ಕಳು ಮರಿಗಳು ನಾಯಿ ಬೆಕ್ಕುಗಳ ಸಮೂಹವೇ ಇರುತ್ತಿತ್ತು. ಎಂದೂ ಆತ ಒಂಟಿಯಾಗಿದ್ದುದು ಯಾರೂ ಕಂಡಿಲ್ಲ.

ಒಂದುದಿನ ಕಿಟ್ಟು ಮಾವ ಮರ ಕಡಿಯಲು ಕಾಡಿಗೆ ಹೋದ. ಒಂದು ಮರ ಕಡಿಯುವಷ್ಟರಲ್ಲಿ ಮಧ್ಯಾಹ್ನವಾಯಿತು. ಹಸಿವಾಯಿತು. ಮರದಮೇಲೆ ಕುಳಿತುಕೊಂಡು ಫಲಹಾರ ಮಾಡಲು ಪ್ರಾರಂಭಿಸಿದರೆ ಪಕ್ಷಿಗಳು ಬಂದು ಕುಳಿತವು. ಅವಕ್ಕೂ ರೊಟ್ಟಿ ಚೂರುಗಳನ್ನು ಕೊಟ್ಟ. ಅವು ಆ ಚೂರುಗಳನ್ನು ತಿಂದು ಸಂತೋಷದಿಂದ ಹಾರಿ ಹೋದವು.

ಅವು ಹೋದಕೂಡಲೇ ಕಿಟ್ಟು ಮಾವನೆದುರಾಗಿ ಆಕಸ್ಮಿಕವಾಗಿ ಒಂದು ಸುಂದರ ಭವನ, ಅದರ ಸುತ್ತಲೂ ಸುಂದರವಾದ ತೋಟ ಕಾಣಿಸಿತು. ಭವನದ ಬಾಗಿಲಲ್ಲಿ ಒಂದು ಕರಿಬೆಕ್ಕು ಕೂತಿತ್ತು.

ಆಶ್ಚರ್ಯದಿಂದ ಕಿಟ್ಟು ಮಾವ ಅಲ್ಲಿಗೆ ಹೋದ. ಕದ ತೆಗೆದುಕೊಂಡು ಮುದುಕಿ ಒಬ್ಬಳು ಹೊರಗೆ ಬಂದು "ಅಪ್ಪಾ ಹುಡುಗಾ

ಗುರುನಾಥ, ಮಂಗಳೂರು



ನಿನ್ನ ಹತ್ತಿರ ಒಳ್ಳೆ ಕೊಡಲಿ ಇರುವ ಹಾಗಿದೆ. ನನಗೊಂದಿಷ್ಟು ಕಟ್ಟಿಗೆ ಸೀಳಿ ಕೊಡ್ತೀಯಾ" ಎಂದು ಕೇಳಿದಳು. ಅದಕ್ಕೆ ಕಿಟ್ಟು ಮಾವ "ಆಗಲಿ, ಅಜ್ಜೀ ಹಿರಿಯರ ಸೇವೆಗಿಂತಲೂ ಹೆಚ್ಚೇನಿದೆ?" ಎಂದ. ಅಜ್ಜಿ ತೋರಿಸಿದ ಕಟ್ಟಿಗೆಯನ್ನೆಲ್ಲಾ ಚಕಚಕನೆ ಒಡೆದು, ಅಚ್ಚುಕಟ್ಟಾಗಿ ಅದನ್ನು ಜೋಡಿಸಿಟ್ಟ. ಅಲ್ಲೇ ಹತ್ತಿರದಲ್ಲಿದ್ದ ಪೊರಕೆ ತೆಗೆದುಕೊಂಡು ಸುತ್ತಲೂ ಬಿದ್ದಿದ್ದ ತರಗೆಲೆಗಳನ್ನು ತೆಗೆದು ಹೊರಗೆ ಹಾಕಿದ.

ಆತನ ಶ್ರದ್ಧೆ ಭಕ್ತಿಗೆ ಅಜ್ಜಿ ಸಂತೋಷಗೊಂಡಳು. "ಅಪ್ಪಾ, ಮಗೂ, ಹೇಳಿದ ಕೆಲಸ ಚೆನ್ನಾಗಿ ಮಾಡಿದೆ. ನಿನ್ನ ಕಷ್ಟಕ್ಕೆ ಬದಲಾಗಿ ಏನು ಬೇಕೋ ಕೇಳಿಕೋ" ಎಂದಳು.

"ನಾನೇನೂ ಕಷ್ಟಪಟ್ಟಿಲ್ಲ. ನಿನ್ನ ಅಮೃತ ಹಸ್ತದಿಂದಿಷ್ಟು ನೀರು ಕೊಟ್ಟರೆ ಸಾಕು" ಎಂದ ಕಿಟ್ಟು ಮಾವ.

ಮುದುಕಿ ಕಿಟ್ಟು ಮಾವನನ್ನು ಒಳಗೆ ಬರುವಂತೆ ಹೇಳಿದಳು. ಆತನು ಮರ್ಯಾದೆಗಾಗಿ ತನ್ನ ಜೋಡನ್ನು ಹೊರಗೆ ಕಳಚಿ ಒಳಗೆ ಬಂದ. ಲೋಟಾದಲ್ಲಿ ಸವಿಯಾದ ಹಾಲು ತಂದುಕೊಟ್ಟಳು. "ತಮ್ಮಾ, ನೀನು ಮತ್ತು ನಿನ್ನ ಗುಣಗಳನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ. ನಿನ್ನನ್ನು ಆಶೀರ್ವದಿಸಿ ಒಂದು ಬಹುಮಾನ ನೀಡಬೇಕೆಂದು ನಿಶ್ಚಯಿಸಿರುವೆನು. ಆದ್ದರಿಂದ ನಿನಗೆ ಈ ಭವನದಲ್ಲಿ ಕಾಣಿಸುವ ವಸ್ತುವಿನಲ್ಲಿ ಯಾವುದು ಬೇಕೋ ಆರಿಸಿಕೋ" ಎಂದು ಅಂದಳು ಮುದುಕಿ.

ಸುತ್ತಲೂ ನೋಡಿ ಕಿಟ್ಟು ಮಾವ ಒಂದು ಮೂಲೆಯಲ್ಲಿದ್ದ ಆರಾಮುಕುರ್ಚಿಯ ಕಡೆ ದೃಷ್ಟಿನಿಲ್ಲಿಸಿದ. ಅಜ್ಜಿ ಆತನ ಕುತೂಹಲವನ್ನು ಅರಿತು "ಮಗೂ, ನಾನು ನಿನಗೆ ಯಾವುದನ್ನು ಕೊಡಬೇಕೆಂದಿದ್ದೆನೋ ಆ ವಸ್ತುವಿನ ಮೇಲೇ ನಿನ್ನ ಕಣ್ಣು ಬಿತ್ತು. ಈ ಕುರ್ಚಿ ತುಂಬಾ ಮಹಿಮೆಯುಳ್ಳದ್ದು. ಅದನ್ನು ತೆಗೆದುಕೊಂಡು ಹೋಗು. ಅದರಿಂದ ನಿನ್ನ ಅದೃಷ್ಟ ಒಳ್ಳೆಯದಾಗುವುದು. ಕೀರ್ತಿ ಬರುವುದು" ಎಂದು ಮುದುಕಿ ಹೇಳಿದಳು.

ಕಿಟ್ಟು ಮಾವ ಅಜ್ಜಿಗೆ ನಮಸ್ಕಾರಮಾಡಿ ಕುರ್ಚಿಯನ್ನು ಹೆಗಲಮೇಲೇರಿಸಿಕೊಂಡು

ಹಿಂದೆ ಹಿಂದಕ್ಕೆ ತಿರುಗಿ ನೋಡುತ್ತಾ ಮುಂದಕ್ಕೆ ಹೆಜ್ಜೆ ಹಾಕುತಿದ್ದ. ಆದರೆ ಆತನು ನೋಡುತ್ತಿದ್ದಂತೆಯೇ ಆ ಭವನವೂ, ತೋಟವೂ ಅದೃಶ್ಯವಾದವು. ಕಿಟ್ಟು ಇದೇನು ಕನಸೇ! ಎಂದು ಕಣ್ಣುಜ್ಜಿ ನೋಡಿದ. ತನ್ನ ಕುರ್ಚಿ ಮುಟ್ಟಿ ನೋಡಿಕೊಂಡ. ಕುರ್ಚಿ ಇತ್ತು. ಮನೆ ಮಾತ್ರ ಮಾಯ. ಆಶ್ಚರ್ಯಪಡುತ್ತಾ ಮನೆಗೆ ಬಂದ.

ಕಿಟ್ಟು ಮಾವ ಮನೆ ಸೇರಿ, ಕುರ್ಚಿಯಲ್ಲಿ ಹಾಯಾಗಿ ಮಲಗಬಹುದೆಂದುಕೊಳ್ಳುತ್ತಿದ್ದ-ಆ ಕುರ್ಚಿಯನ್ನು ಶುಭ್ರವಾಗಿ ಒರಸಿ ಒಂದು ಅಚ್ಚುಕಟ್ಟಾದ ಸ್ಥಳದಲ್ಲಿಟ್ಟು ಸಿದ್ಧಮಾಡುತ್ತಿರುವ ಸಮಯಕ್ಕೆ ಸರಿಯಾಗಿ ಆತನ ಆಪ್ತ ಸ್ನೇಹಿತ ಸೀನು ಬಂದ. ಸೀನು ಪ್ರತಿ ಭಾನುವಾರ ಕಿಟ್ಟು ಮಾವನ ಮನೆಗೆ ಬರುವ ಪದ್ಧತಿ ಹಾಗೇ ಅಂದೂ ಬಂದ. ಪಾಪ, ಸೀನು ಕುರುಡ. ಆತನನ್ನು ಯಾರೂ ಹತ್ತಿರ ಸೇರಿಸುತ್ತಿರಲಿಲ್ಲ. ಆದರೆ ಕಿಟ್ಟು ಮಾವನಿಗೆ ಮಾತ್ರ ಸೀನು ಎಂದರೆ ಪ್ರಾಣ.

ಸೀನು ಬಂದಕೂಡಲೇ ಕಿಟ್ಟು ಆ ದಿನ ನಡೆದ ವಿಚಿತ್ರವನ್ನು ಹೇಳಿ, ತಾನು ಗಳಿಸಿಕೊಂಡು ಬಂದ ಕುರ್ಚಿಯಲ್ಲಿ ಆತನನ್ನು ಕೂರಿಸಿದ.

ಸೀನು ಆ ಕುರ್ಚಿಯಲ್ಲಿ ಕುಳಿತು, ಸ್ವಲ್ಪ ಹೊತ್ತು ಅತ್ತಿತ್ತ ತೂಗಾಡಿ ಸಣ್ಣ ಸ್ವರದಲ್ಲಿ ಕುಂಯ್ ಗುಟ್ಟಲು ಪ್ರಾರಂಭಿಸಿದ. ಹಾಗೆಯೇ ಕ್ರಮೇಣ ದೊಡ್ಡದಾಗಿ ಅನೇಕ




ಕೃತಿಗಳನ್ನು ಹಾಡಲು ಮೊದಲುಮಾಡಿದ. ಆ ಹಾಡುಗಳು ಅದ್ಭುತವಾಗಿ ಆನಂದದಾಯಕವಾಗಿದ್ದುದರಿಂದ ಕಿಟ್ಟು ಮಾವ ನಿಶ್ಚೇಷ್ಟಿತನಾಗಿ ಕೇಳುತ್ತಾ ಕುಳಿತುಬಿಟ್ಟ.

ಮಧ್ಯಾಹ್ನ ಎರಡು ಗಂಟೆ ವೇಳೆಗೆ ಸೀನು ಹಾಡುವ ಹಾಡು ನಿಂತಿತು. ಆತನು ಕುರ್ಚಿಯಿಂದ ಎದ್ದ. ಎದ್ದಕೂಡಲೇ ಕಿಟ್ಟು ಸೀನುವನ್ನು ಆಲಂಗಿಸಿ "ಶೀನೂ, ಎಷ್ಟೋ ದಿನದಿಂದ ನಾವು ಸ್ನೇಹಿತರು. ಆದರೂ ಇಷ್ಟು ಸೊಗುಸಾಗಿ ಹಾಡುತ್ತೀನೆಂದು ಒಂದು ಬಾರಿಯಾದರೂ ನನಗೆ ತಿಳಿಸಿಲ್ಲ." ಎಂದ. ಅದಕ್ಕೆ ಸೀನು "ಇಲ್ಲ ಕಿಟ್ಟು. ನನಗೆ ಹಾಡಲು ಬರುವುದಿಲ್ಲ." ಎಂದ. "ಭಲೆ! ಸೀನು! ಸಂಗೀತ ಮಾತ್ರ ಅಲ್ಲ ಸುಳ್ಳೂ ಬರುತ್ತೆ ಎಂತ



ಕೂಡದು." ಎಂದು ನಿರ್ಧಾರ ಮಾಡಿದ. ತಾನೂ ಕೂತುಕೊಳ್ಳುತ್ತಿರಲಿಲ್ಲ.

ಸೀನು ಹಾಡಬಲ್ಲನೆಂಬ ವಿಷಯ ಕಿಟ್ಟು ಹೊರತು ಅನ್ಯರಿಗೆ ತಿಳಿಯದು. ಕುರ್ಚಿಯಲ್ಲಿ ಕುಳಿತಾಗ ಅಲ್ಲದೆ ಬೇರೆ ಸಮಯದಲ್ಲಿ ಹಾಡಲು ಪ್ರಯತ್ನ ಮಾಡಿದ ಸೀನು. ಎಷ್ಟು ಪ್ರಯತ್ನ ಮಾಡಿದರೂ ಅಪಸ್ವರ ಮಾತ್ರ ಹೊರಬೀಳುತಿತ್ತು.

ಹೀಗೆ ಇರುವಲ್ಲಿ ಆ ರಾಜ್ಯವನ್ನು ಆಳುತ್ತಿದ್ದ ರಾಜನಿಗೆ ಖಾಯಿಲೆಯಾಯಿತು. ಅನ್ನ ಸೇರುತ್ತಿರಲಿಲ್ಲ. ನಿದ್ರೆ ಬರುತ್ತಿರಲಿಲ್ಲ. ಸದಾ ವ್ಯಾಕುಲನಾಗಿರುತ್ತಿದ್ದ. ನಗು ಎಂಬುದೇ ಇಲ್ಲ. ದರ್ಬಾರಿನಲ್ಲಿದ್ದ ವಿದೂಷಕರೆಲ್ಲಾ ಬಂದು ರಾಜನನ್ನು ನಗಿಸಲು ತಮ್ಮ ಶಕ್ತ್ಯಾನುಸಾರ ಪ್ರಯತ್ನಮಾಡಿದರು. ಆದರೆ ಅವರಿಂದೇನೂ ಸಾಧ್ಯವಾಗಲಿಲ್ಲ.

ಘನವೈದ್ಯರು ಬಂದು ನೋಡಿ "ಇದು ಶರೀರಸಂಬಂಧವಾದ ಬೇನೆ ಅಲ್ಲ. ಯಾವುದಾದರೂ ಕೌತುಕವಾದ ವಸ್ತುವನ್ನು ತೋರಿಸಿದರೆ ಸರಿಹೋಗುವುದು" ಎಂದು ಹೇಳಿದರು.

ಅವರ ಸಲಹೆಯಂತೆ ರಾಜ್ಯದಲ್ಲಿನ ಪರಿವಾರವೆಲ್ಲವೂ ಕೌತುಕ ವಸ್ತುಗಳನ್ನು ತರಲು ದೇಶವೆಲ್ಲಾ ತಿರುಗಾಡಿದರು. ಒಬ್ಬೊಬ್ಬನೂ ಒಂದೊಂದು ಅಪರೂಪವಾದ ವಸ್ತು ತಂದನು. ಆದರೆ ಅದರಲ್ಲಿ ಒಂದೂ ರಾಜನ ಮನಸ್ಸಿನಮೇಲೆ ಪರಿಣಾಮವಾಗಲಿಲ್ಲ.

ಗೊತ್ತಾಯಿತು." ಎಂದು ತಮಾಷೆ ಮಾಡಿದ ಕಿಟ್ಟು. "ಖಂಡಿತ ಇಲ್ಲ. ಸಂಗೀತವೆಂದರೇನೇ ನನಗೆ ಸರಿ ಬೀಳುವುದಿಲ್ಲ. ಈಗ ಹೇಗೆ ಹಾಡಿದೆನೋ ನಾನರಿಯೆ. ನನಗೇ ಆಶ್ಚರ್ಯವಾಗಿದೆ" ಎಂದು ಸೀನು ಸುಮ್ಮನಾದ.

ಈರೀತಿ ಪ್ರತಿ ಭಾನುವಾರವೂ ಸೀನು ಬಂದು ಆ ಕುರ್ಚಿಯಲ್ಲಿ ಕುಳಿತು ಅಮರ ಗಾನವನ್ನು ಹಾಡುವನು. ಮಧ್ಯಾಹ್ನ ಎರಡು ಗಂಟೆಯ ವೇಳೆಗೆ ಆ ಹಾಡು ನಿಂತುಬಿಡುವುದು. ಈ ಸಂಗೀತಕ್ಕೆ ಕಿಟ್ಟು ಮಾವ ತನ್ಮಯನಾಗುವನು. ಸೀನುವಿನಮೇಲೆ ಆತನ ಅಭಿಮಾನ ಎಷ್ಟರಮಟ್ಟಿಗೆ ಇತ್ತೆಂದರೆ "ಇದು ಸೀನೂವಿನ ಕುರ್ಚಿ. ಈ ಕುರ್ಚಿಯಲ್ಲಿ ಸೀನು ಹೊರತು ಮತ್ತೆ ಯಾರೂ ಕೂರ



ಆ ಪರಿವಾರದಲ್ಲೆಲ್ಲಾ ವೇಣು ರಾಜಭಕ್ತಿ ಪರಾಯಣ. ಅವನು ಅಲೆದಲೆದು ಕಿಟ್ಟು ಮಾವನ ಮನೆಯ ಸಮೀಪಕ್ಕೆ ಬರುತ್ತಿರುವ ಸಮಯದಲ್ಲಿ ಸೀನು ಹಾಡುತ್ತಿದ್ದ. ಆ ಗಾನವನ್ನು ಕೇಳಿದಕೂಡಲೇ ವೇಣುವಿನ ಶರೀರ ಬಾಧೆಗಳೆಲ್ಲವೂ ಮಾಯವಾಗಿ ಹೊಸ ಹುರುಪನ್ನು ಉಂಟುಮಾಡಿತು. ಕೂಡಲೇ ರಾಜನ ಸಮೀಪಕ್ಕೆ ಹೋಗಿ ಹೇಳಿದ. ಈ ವಿಚಿತ್ರ ಹಾಡುಗಾರನನ್ನು ಕರೆತರುವಂತೆ ಭಟರಿಗೆ ಆಜ್ಞೆ ಮಾಡಿದ ರಾಜ.

ವೇಣು ಕಿಟ್ಟುಮಾವನ ಕುಟೀರಕ್ಕೆ ಹೋದ. ಅವರಿಬ್ಬರನ್ನೂ ರಾಜರ ಹತ್ತಿರಕ್ಕೆ ಬರುವಂತೆ ಬಲವಂತಮಾಡಿದ. "ನಮಗೆ ಸಂಗೀತ ಬರುವುದಿಲ್ಲ" ಎಂದರವರು. ಅವರು ನಾಚಿಕೆ ಪಡುತ್ತಿರುವರೆಂದು ಭಾವಿಸಿ ವೇಣು "ತಾವು ಮಹಾ ವಿದ್ವಾಂಸರಾಗಿದ್ದೂ ಏಕೆ ಹಿಂದೇಟು ಹಾಕುವಿರಿ. ರಾಜನು ನಿಮ್ಮ ಸಂಗೀತವನ್ನು ಕೇಳಿ, ಮೆಚ್ಚಿಕೊಂಡು ಬಹುಮಾನ ಮಾಡುವನು. ಆತನಿಗೆ ಸಂತೋಷವಾಯಿತೆಂದರೆ ನಿಮ್ಮನ್ನು ಆಸ್ಥಾನದಲ್ಲಿ ಮಂತ್ರಿಗಳಾಗಿ ನೇಮಿಸುವನು" ಎಂದು ಪ್ರೋತ್ಸಾಹಿಸಿದ.

ಹಾಗೂ ಹೀಗೂ ಮಾಡಿ ಸೀನುವನ್ನು ಕರೆದುಕೊಂಡು ಹೋಗಿ ರಾಜನ ಮುಂದೆ ನಿಲ್ಲಿಸಿದ. ಒಂದು ಹಾಡು ಹೇಳುವಂತೆ ಸೀನುವನ್ನು ಕೇಳಿದ ರಾಜ. ಸೀನು ಗಂಟಲು ಸರಿಮಾಡಿಕೊಂಡು ಹಾಡಲು ಉಪಕ್ರಮಿಸಿದ. ಆದರೆ ಕಂಠದಿಂದ ಅಪಸ್ವರ ಹೊರಟಿತು. ಈ ವಿದಾಂಸನು ಗರ್ವಿಷ್ಟನಿರಬೇಕೆಂದೂ, ತನ್ನನ್ನು ಅಪಹಾಸ್ಯ ಮಾಡುತ್ತಿರುವನೆಂದೂ ತಿಳಿದುಕೊಂಡು ರಾಜ ಸೀನುವನ್ನು ಸೆರೆಮನೆಯಲ್ಲಿರಿಸಿದ.

ಸೀನು ಬಂದಿಯಾದನೆ ಹೊರತು ರಾಜನ ಸ್ಥಿತಿ ಸುಧಾರಿಸಲಿಲ್ಲ. ಏನಾದರೂ ಸರಿ, ಅಪರೂಪವಾದ ವಸ್ತುವನ್ನು ಹುಡುಕಿಕೊಂಡೇ ಬರಬೇಕೆಂದು ವೇಣು ಮತ್ತೆ ಹೊರಟ. ಹೋಗಿ ಹೋಗಿ ಅಡವಿ ಸೇರಿದ. ಅಲ್ಲಿ ಕಿಟ್ಟು ಮಾವನಿಗೆ ಕಾಣಿಸಿದಂತಹ ಭವನ ಮತ್ತು ತೋಟ ಕಾಣಿಸಿತು ವೇಣುವಿಗೆ.

ವೇಣು ಹೊಸ್ತಿಲು ಹತ್ತುವ ವೇಳೆಗೆ ಬಾಗಿಲು ತೆರೆದುಕೊಂಡು ಮುದುಕಿ ಒಬ್ಬಳು



ಹೊರಗೆ ಬಂದಳು. ಆಗ ಆತನು "ಅಜ್ಜೀ, ಅಜ್ಜೀ, ನಮ್ಮ ರಾಜನ ರೋಗ ಗುಣವಾಗಲು ಯಾವುದಾದರೂ ಅಪೂರ್ವ ವಸ್ತುವನ್ನು ಕೊಡಬಲ್ಲೆಯಾ?" ಎಂದು ಕೇಳಿದ. ಅದಕ್ಕೆ ಆಕೆ "ಹೋಗಯ್ಯಾ! ನೀನೊಬ್ಬ ಹುಚ್ಚ. ನಿಮ್ಮ ರಾಜನೊಬ್ಬ ದೊಡ್ಡ ಹುಚ್ಚ. ನಿಮಗೇನು ಬೇಕೋ ನಿಮಗೇ ತಿಳಿಯದು. ಎದುರಾಗಿರುವ ವಸ್ತುವನ್ನು ನೋಡಿಯೂ ತಿಳಿಯಲಾರಿರಿ; ಹೋಗು ಹೋಗು" ಎಂದು ಗದರಿಸಿ ಬಾಗಿಲು ಮುಚ್ಚಿಕೊಂಡಳು.

ಈ ಮುದುಕಿ ಬಲುಗರ್ವಿಷ್ಟಳಂತೆ ತೋರುವುದು. ಇಲ್ಲದಿದ್ದರೆ ಹೀಗೆ ಹೇಳುವಳೇ ಎಂದು ಮನಸ್ಸಿನಲ್ಲಿ ವೇಣು ಅಂದುಕೊಂಡು ಮತ್ತೆ ಹಿಂತಿರುಗಿ ನೋಡುವಲ್ಲಿ ಅಜ್ಜಿಯೂ ಕಾಣಿಸಲಿಲ್ಲ, ಭವನವೂ ಕಾಣಿಸಲಿಲ್ಲ. ವೇಣು ಕಂಗಾಲಾದ. ಭೂತಚೇಷ್ಟೆಯೋ ಎಂದು ಬೆದರಿದ. ಕಾಲುಗಳನ್ನು ಎಳೆದುಕೊಂಡು ಹಿಂದಕ್ಕೆ ಬಂದ.

ವೇಣು ಮತ್ತೆ ಕಿಟ್ಟುಮಾವನ ಕುಟೀರ ಸೇರಿದ. ತನ್ನ ಆಪ್ತಮಿತ್ರ ಸೀನುವಿನ ವಿಷಯ ಕೇಳಿದ ಕಿಟ್ಟು. ಆತನು ಸೆರೆಮನೆಯಲ್ಲಿರುವನೆಂದ ವೇಣು. ಕಿಟ್ಟು ಮಾವ ಬಹಳ ದುಃಖಪಟ್ಟ. "ಸರಿ, ನಡೆದು ಹೋದ ವಿಷಯಕ್ಕೆ ಏನು ಮಾಡಬಲ್ಲೆವು. ಮುಂದಿನ ವಿಷಯವನ್ನು ಯೋಚಿಸೋಣ ಅಲ್ಲಿ ಕುಳಿತುಕೊಳ್ಳಿ" ಎಂದು ವೇಣುವನ್ನು ಆರಾಮ ಕುರ್ಚಿಯಲ್ಲಿ ಕೂರಿಸಿದ.

ಕುರ್ಚಿಯಲ್ಲಿ ಕುಳಿತು ಒಂದು ನಿಮಿಷ ಇಲ್ಲ ಅಷ್ಟರಲ್ಲಿ ವೇಣು ಸಣ್ಣ ಸ್ವರದಲ್ಲಿ ಕುಂಯ್ ಗುಟ್ಟಲು ಪ್ರಾರಂಭಿಸಿದ. ಕ್ರಮೇಣ ಆ ರಾಗವು ದೊಡ್ಡದಾಗಿ ಉತ್ತಮ ಕೃತಿಗಳನ್ನು ಹಾಡಲು ಪ್ರಾರಂಭಿಸಿದ. ಆ ಹಾಡುಗಳು ತನ್ನ ಮಿತ್ರ ಸೀನು ಹಾಡಿದ ಹಾಗೆಯೇ ಇದ್ದುದರಿಂದ ವೇಣು ತನ್ನನ್ನು ಪರಿಹಾಸ ಮಾಡುತ್ತಿರುವನೆಂದು ನೆನೆದು ಕಿಟ್ಟು ಮಾವ ಆತನ ಭುಜ ಹಿಡಿದು ಕುರ್ಚಿಯಿಂದ ಎಳೆದ.

ಸ-ರಿ-ಗ-ಮ ಹಾಡಲು ಬರದ ತನಗೆ ಇಷ್ಟು ಉತ್ತಮ ಹಾಡು ಹಾಡಲು ಸಾಧ್ಯವಾದುದಕ್ಕೆ ವೇಣು ಆಶ್ಚರ್ಯಪಟ್ಟು ಈ ಕೌತುಕದಿಂದ ರಾಜನ ಕಾಯಿಲೆಯು ವಾಸಿ

yಯಾಗುವುದೆಂದುಕೊಂಡ. ವೇಣು ಕೋಟೆಗೆ ಹೊರಡುವಾಗ 'ರಾಜನೊಂದಿಗೆ ಹೇಳಿ ಸೀನುವನ್ನು ಬಿಡಿಸಿಕೊಳ್ಳುವೆ' ಎಂದು ಕಿಟ್ಟು ಮಾವನೂ ಆತನ ಸಂಗಡ ಹೊರಟ.

ವೇಣು ಅರಮನೆ ಸೇರುವ ವೇಳೆಗೆ ರಾಜನು ಮೊದಲಿಗಿಂತಲೂ ಹೆಚ್ಚು ವ್ಯಾಕುಲನಾಗಿರುವಂತೆ ಕಾಣಿಸಿತು. ಆಗ ವೇಣು "ಮಹಾಪ್ರಭೂ, ನಾನು ಈಗ ಅಪೂರಗಾನ ಹಾಡುವ ಶಕ್ತಿ ಪಡೆದಿದ್ದೇನೆ. ಈ ಗಾನವನ್ನು ಕೇಳಿದರೆ ಖಂಡಿತ ನಿಮ್ಮ ಮನೋವೇದನೆ ತೊಲಗುವುದು. ನೋಡೀ ವಿಚಿತ್ರ" ಎಂದು ಗಂಟಲು ಸರಿಮಾಡಿಕೊಂಡು ಹಾಡಲು ಪ್ರಯತ್ನಪಟ್ಟ. ಆತನು ಎಷ್ಟೋ ಪ್ರಯತ್ನಪಟ್ಟರೂ ಕಂಠದಿಂದ ಅಪಸ್ವರ ಮಾತ್ರ ಹೊರಟಿತ್ತು.

ರಾಜನಿಗೆ ಕೋಪ ಬಂತು. 'ಆ ಸಂಗೀತ ವಿದ್ವಾಂಸ ಗರ್ವದಿಂದ ಅಪಸ್ವರ ಹಾಡಿದನೆಂದರೆ ಈಗ ತನ್ನ ನಚ್ಚಿನ ಬಂಟನೇ ತನ್ನನ್ನು ಅಪಹಾಸ್ಯ ಮಾಡುತ್ತಿರುವನಲ್ಲಾ' ಎಂದು ಬೇಸರದಿಂದ "ಈಸಾರಿ ನಾನು ಹಾಡ ಬಲ್ಲೆ ಎಂದು ಯಾರಾದರೂ ನನ್ನಮುಂದೆ ಬಂದು ನಿಲ್ಲಲಿ, ಅವರ ಹೊಟ್ಟೆ ಸೀಳಿಬಿಡುತ್ತೇನೆ" ಎಂದು ಕೋಪದಿಂದ ರಾಜ ವೇಣುವನ್ನು ಗದರಿಸಿದ.

ಅಂದು ರಾತ್ರಿ ರಾಜನಿಗೆ ಒಂದು ಕನಸು ಬಿತ್ತು. ವೃದ್ಧಳ ರೂಪದಲ್ಲಿದ್ದ ದೇವಕನ್ಯೆ ಕಾಣಿಸಿಕೊಂಡು "ಅಯ್ಯಾರಾಜ, ಕುರುಡರು,



ಕುಂಟರು, ಹಸುಳೆಗಳು ದೇವತೆಗಳ ಮಿತ್ರರೆಂಬ ಮಾತು ಮರೆತೆಯಾ? ನಿನ್ನ ಸ್ನೇಹಿತ ವೇಣು ನಮ್ಮ ದೇವತೆಗಳ ಮಹಿಮೆಯನ್ನು ಭಗ್ನಮಾಡುತ್ತಿದ್ದರೆ ನೀನು ಹಾಗೆ ಸುಮ್ಮನಿರಬಹುದೇ? ನಿನ್ನ ತಪ್ಪು ತಿಳಿದುಕೋ ತಿಳಿದು ಸರಿಪಡಿಸಿಕೋ" ಎಂದು ಹೇಳಿ ಅದೃಶ್ಯಳಾದಳು.

ರಾಜ ಕೂಡಲೇ ಸೀನುವನ್ನು ಸೆರೆಮನೆಯಿಂದ ಬಿಡಿಸಿದ. ಪರಿವಾರದೊಂದಿಗೆ ಅಡವಿಗೆ ಹೋದ. ಅಲ್ಲಿ ಭವನ ಕೋಟೆ ಬಾಗಿಲಲ್ಲಿ ಒಂದು ಕರೀ ಬೆಕ್ಕು ಎಲ್ಲಾ ಕಾಣಿಸಿದವು. ರಾಜ ನೇರವಾಗಿ ಭವನದೊಳಕ್ಕೆ ಹೋದ. ಅಲ್ಲಿ ಮೇಜಿನಮೇಲೊಂದು ಚೀಟಿ ಇತ್ತು. ಆ ಚೀಟಿಯಲ್ಲಿ 'ವೃದ್ಧಳು ಹೊರಟು

ಹೋದಳು ಮತ್ತೆ ನಾಳೆಯೇ ದರ್ಶನ' ಎಂದಿತ್ತು.

ಸರಿ, ನಾಳೆ ನೋಡಬಹುದೆಂದು ರಾಜ ಮನೆಯಕಡೆ ದಾರಿ ತೆಗೆದ. ದಾರಿಯಲ್ಲಿ ಆತನಿಗೆ ಕಿಟ್ಟು ಮಾವನ ಮನೆ ಸಿಕ್ಕಿತು. ಅಲ್ಲಿ ಅಮರಗಾನ ಕೇಳಿಸಿತು. ಬಹಳ ಆನಂದದಿಂದ ಒಳಗೆ ಹೋದ. ರಾಜನೇ ಸ್ವತಃ ತನ್ನ ಮನೆಗೆ ಬಂದಿರುವುದನ್ನು ಕಂಡು ಕಿಟ್ಟು ಮಾವನಿಗೆ ಬಹಳ ಸಂತೋಷ ವಾಯಿತು. ಆತನು ರಾಜನನ್ನೂ ಆದರದಿಂದ ಬರಮಾಡಿಕೊಂಡು ಆರಾಮ ಕುರ್ಚಿಯ ಮೇಲೆ ಕುಳಿತುಕೊಳ್ಳುವಂತೆ ಪ್ರಾರ್ಥಿಸಿದ.

ಕುಳಿತುಕೊಂಡ ಸ್ವಲ್ಪ ಸಮಯದಲ್ಲಿ ರಾಜ ಕುಯ್ ಗುಟ್ಟಲು ಷುರುಮಾಡಿದ. ಕ್ರಮೇಣ ಕೃತಿಗಳನ್ನು ಹಾಡಲು ಪ್ರಾರಂಭಿಸಿದ. ಈಗ ಆತನು ಯಾವ ಬಾಧೆಯೂ ಇಲ್ಲದೆ ಸುಖವಾಗಿರುವಂತೆ ತೋರಿತು.

ಆಗ ಕಿಟ್ಟು ಮಾವ ಉತ್ಸಾಹದಿಂದ ಜಿಗಿದು "ಸೀನೂ, ನೀನು ಹಾಡಿದೆ; ವೇಣು ಹಾಡಿದ. ಅದೇ ಹಾಡು ಈಗ ಮಹಾ ರಾಜರೂ ಹಾಡುತ್ತಿರುವರು ಈ ಚಮತ್ಕಾರ ವೆಲ್ಲವೂ ಈ ಕುರ್ಚಿಯಲ್ಲೇ ಇದೆ. ನನಗೆ ಆ ವೃದ್ಧಳು ಕೊಡುವಾಗ ಇದು ಮಹಿಮೆ ಯುಳ್ಳ ಕುರ್ಚಿ ಎಂದು ಹೇಳಿದಳು" ಎಂದನು.

ಆಗ ಅಶರೀರವಾಣಿಯೊಂದು "ಈ ರಹಸ್ಯ ತಿಳಿಯಲು ಇಷ್ಟುದಿನ ಹಿಡಿಯಿತೇ" ಎಂದು ಗಹಗಹಿಸಿ ನಕ್ಕಿತು.

"ಸರಿ, ನನ್ನ ತಪ್ಪು ನಾನು ಅರಿತೆ!" ಎಂದ ರಾಜ. ಆ ಮಹಿಮೆಯುಳ್ಳ ಸಂಗೀತದ ಕುರ್ಚಿಯನ್ನೂ ಅದರೊಂದಿಗೆ ಸೀನು, ಮತ್ತು ಕಿಟ್ಟುವನ್ನೂ ರಾಜ ತನ್ನೊಂದಿಗೆ ಕರೆದುಕೊಂಡು ಹೋದ. ಕುರ್ಚಿಯನ್ನು ಅರಮನೆಯಲ್ಲಿ ಪ್ರಶಸ್ತವಾದ ಸ್ಥಳದಲ್ಲಿಟ್ಟು ಅಂದಿನಿಂದ ಕಿಟ್ಟು ಸೀನರನ್ನು ತನ್ನ ಆಸ್ಥಾನದಲ್ಲಿಟ್ಟುಕೊಂಡು ಸರ್ವವಿಧದಲ್ಲಿ ಯೂ ಅನುಕೂಲಪಡಿಸಿದ.






ಪೂರ್ವಕಾಲದಲ್ಲಿ ಒಂದಾನೊಂದು ಅಡವಿಯಲ್ಲಿ ಒಂದುಕಡೆ ಶಿವನು ಲಿಂಗರೂಪದಲ್ಲಿ ಬೆಳಗುತ್ತಿದ್ದನು. ರಾತ್ರಿ ಹೊತ್ತು ಆ ಅಡವಿಯಲ್ಲಿ ಹರಿದಾಡುತ್ತಿದ್ದ ಸರ್ಪರಾಜನು ಶಿವಭಕ್ತ. ಪ್ರತಿದಿನ ರಾತ್ರಿ ಅಲ್ಲಿಗೆ ಬಂದು ಆ ಲಿಂಗಕ್ಕೆ ಪೂಜೆಮಾಡಿ ಹೋಗಬೇಕೆಂದು ನಿರ್ಧರಿಸಿದನು. ಹಾವುಗಳ ಹತ್ತಿರ ಬೆಲೆಬಾಳುವ ಮಣಿಮಾಣಿಕ್ಯಗಳಿರುವುವು. ಮಣಿಗಳೆಂದರೆ ಅವಕ್ಕೆಷ್ಟೋ ಪ್ರೀತಿ. ಆ ನಾಗರಾಜನು ಹುತ್ತದೊಳಗೆ ಹೋಗಿ ತನ್ನ ಹತ್ತಿರವಿದ್ದ ಮಣಿಮಾಣಿಕ್ಯಗಳನ್ನೂ ವಜ್ರವೈಡೂರ್ಯಗಳನ್ನೂ, ಕೆಂಪು, ಪಚ್ಚೆ, ನೀಲಿ, ಪುಷ್ಯರಾಗ ಮುಂತಾದ ಎಲ್ಲವಿಧವಾದ ರತ್ನಗಳನ್ನೂ ತಂದು ಆ ಲಿಂಗದಮೇಲಿಟ್ಟು ಭಕ್ತಿಯಿಂದ ಪೂಜೆಮಾಡಿ ಹೋದನು.

ಆ ಅಡವಿಯಲ್ಲೇ ದೊಡ್ಡದೊಂದು ಆನೆ ಇತ್ತು. ಅದು ಆನೆಗಳಿಗೆಲ್ಲಾ ಒಡೆಯ. ಸರ್ಪರಾಜನು ಪೂಜೆಮಾಡಿ ಹೋದ ಮಾರನೇ ದಿನ ಗಜರಾಜ ಆ ದಾರಿಯಲ್ಲಿ ಬಂದು ಶಿವಲಿಂಗವನ್ನು ನೋಡಿದ. ಗಜರಾಜನೂ ಶಿವನ ಪರಮ ಭಕ್ತ. ಶಿವಲಿಂಗವು ಕಾಣಿಸಿದ ಕೂಡಲೇ ಮುಂಗಾಲೂರಿ ಸೊಂಡಿಲೆತ್ತಿ ನಮಸ್ಕಾರಮಾಡಿದ. ಲಿಂಗದ ಮೇಲಿರಿಸಿದ್ದ ಮಣಿಗಳನ್ನು ಕಂಡು ಕುಪಿತನಾದ. ಮಣಿಗಳು ಹಾವಿಗೆ ಹೆಚ್ಚಾದರೆ, ಆನೆಗೆ ಹೆಚ್ಚೇ? "ಯಾರು ಈ ಧೂರ್ತ? ಪರಮೇಶ್ವರನ ಮೇಲೆ ಕಲ್ಲುಗಳನ್ನು ಹೊರಿಸಿದ್ದಾನೆ" ಎಂದುಕೊಂಡು ಮಣಿಗಳನ್ನು ತನ್ನ ಸೊಂಡಿಲಿಂದ ತೆಗೆದು ಬಿಸಾಡಿದ.

ಮಣಿಗಳನ್ನಿಟ್ಟಿದ್ದ ನಾಗರಾಜನೂ, ತನ್ನಂತೆಯೇ ಶಿವಭಕ್ತನೆಂದೂ ಬಹಳ ಭಕ್ತಿಯಿಂದ ಲಿಂಗಕ್ಕೆ ಪೂಜೆಮಾಡಿ ಮಣಿಗಳನ್ನರ್ಪಿಸಿ ಹೋದನೆಂದೂ ಗಜರಾಜನಿಗೆ ಹೇಗೆ ಗೊತ್ತು? ಆ ಮಾಣಿಕ್ಯಗಳನ್ನು ಕಲ್ಲುಗಳೆಂದೂ ಪರಮೇಶ್ವರನ ಸನ್ನಿಧಿಯಲ್ಲಿರಲು ಅರ್ಹವಲ್ಲವೆಂದೂ ಗಜರಾಜನ ಅಭಿಪ್ರಾಯ. ಅದರಿಂದಲೇ ಅವನ್ನು ದೂರವಾಗಿ ಬಿಸಾಡಿದ.

ಹಾವುಗಳಿಗೆ ಮಣಿ ಎಂದರೆ ಎಷ್ಟು ಪ್ರಿಯವೋ, ಆನೆಗೆ ಪತ್ರೆ, ಹೂಗಳೆಂದರೆ

ಶಿವಶಂಕರ, ಮದರಾಸು.



ಅಷ್ಟೇ ಪ್ರೀತಿ. ಗಜರಾಜನು ಅವಸರವಾಗಿ ಹೋಗಿ ಅಡವಿಯಲ್ಲೆಲ್ಲಾ ತಿರುಗಾಡಿ ಪತ್ರೆಯನ್ನು ತಂದ. ಕೊಳದಲ್ಲಿ ಇಳಿದು ತಾವರೆ ಮತ್ತು ಕಮಲಗಳನ್ನು ಕಿತ್ತು ತಂದ. ಅವೆಲ್ಲವನ್ನೂ ಇಟ್ಟು ಶಿವಲಿಂಗಕ್ಕೆ ಪೂಜೆಮಾಡಿ, ತನ್ನ ದಾರಿ ತಾನು ಹಿಡಿದ.

ಎರಡನೇ ರಾತ್ರಿ ನಾಗರಾಜನು ಹೊಸ ಹೊಸ ರತ್ನಗಳನ್ನು ಸಂಪಾದಿಸಿ, ಪೂಜೆ ಮಾಡಲು ಶಿವಲಿಂಗದ ಹತ್ತಿರಕ್ಕೆ ಬಂದನು. ನೋಡಿದರೆ ಅಲ್ಲೇನಿದೆ? ತಾನು ಹಿಂದಿನ ರಾತ್ರಿ ತಂದಿಟ್ಟ ಮಣಿಗಳು ದೂರದಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ; ಪರಮೇಶ್ವರನ ಮೇಲೆ ಕಸ-ಕಡ್ಡಿ, ಸೊಪ್ಪು-ಸದೆ ಕಾಣಿಸಿತು. ಗಜರಾಜನು ಭಕ್ತಿಶ್ರದ್ಧೆಯಿಂದ ಇಟ್ಟು ಹೋದ ಪತ್ರೆ, ಹೂಗಳು, ನಾಗರಾಜನಿಗೆ ಗಿಡಗೆಂಟೆಯ ಹಾಗೆ ಕಾಣಿಸಿದವು. 'ನನ್ನ ಪೂಜೆಯನ್ನು ಹಾಳುಮಾಡಿ ದೇವರಿಗೆ ಈರೀತಿ ಅಪಚಾರವೆಸಗಿದವನು ಯಾರಿರಬಹುದು' ಎಂದು ಯೋಚಿಸುತ್ತಾ ಸರ್ಪರಾಜನು ಆನೆ ಇಟ್ಟು ಹೋದ ಪತ್ರೆ, ಹೂಗಳನ್ನು ದೂರಕ್ಕೆ ತಳ್ಳಿ, ತಾನು ತಂದ ರತ್ನಗಳಿಂದ ಮತ್ತೆ ಶಿವಲಿಂಗಕ್ಕೆ ಪೂಜೆಮಾಡಿ ಹೋದನು.

ಮರುದಿನ ಗಜರಾಜ ಹಿಂದಿನ ದಿನದಂತೆಯೇ ಪತ್ರೆ, ಹೂಗಳನ್ನು ತೆಗೆದುಕೊಂಡು ಶಿವಲಿಂಗದ ಹತ್ತಿರಕ್ಕೆ ಬಂದ. ನೋಡಿದರೆ ಶಿವಲಿಂಗದಮೇಲೆ ತಾನು ಹಿಂದಿನದಿನ ಇಟ್ಟು ಹೋದ ಹೂ ಪತ್ರೆ ಇರಲಿಲ್ಲ. ಅದರ ಸ್ಥಳದಲ್ಲಿ ಮತ್ತೆ ಕಲ್ಲು ಚೂರುಗಳು ಇರಿಸಲ್ಪಟ್ಟಿದ್ದುವು. 'ಈ ಕಲ್ಲು ಚೂರುಗಳಾತ ಮತ್ತೆ ಬಂದಂತೆ ಕಾಣಿಸುತ್ತದೆ. ನಾನು ಕಲ್ಲುಗಳನ್ನು ಒಂದುಸಾರಿ ಬಿಸಾಡಿದರೆ ಸುಮ್ಮನಿರಲಾರದೆ, ನಾನಿಟ್ಟ ಪತ್ರೆ, ಹೂಗಳನ್ನು ತಳ್ಳಿ ಹಾಕುವನಲ್ಲಾ!' ಎಂದುಕೊಂಡು ನಾಗರಾಜನಿಟ್ಟ ರತ್ನಗಳನ್ನು ದೂರ ಬಿಸಾಡಿದ. ತಾನು ತಂದಿದ್ದ ಪತ್ರೆ ಹೂಗಳಿಂದ ಲಿಂಗಕ್ಕೆ ಪೂಜೆ ಸಲ್ಲಿಸಿ ಹೊರಟು ಹೋದ.

ಮೂರನೇ ರಾತ್ರಿ ನಾಗರಾಜ ಯಥಾಪ್ರಕಾರ ಮಣಿಗಳೊಂದಿಗೆ ಶಿವಲಿಂಗದ ಹತ್ತಿರ ಬಂದ. ತನ್ನ ಪೂಜೆ ಭಗ್ನವಾಗಿರುವು



ದನ್ನೂ, ದೇವರಮೇಲೆ ಕಸ ಕಡ್ಡಿ ಚೆಲ್ಲಿರುವು ದನ್ನು ಕಂಡು ದುಃಖಿಸಿದನು. ಕೋಪವೂ ಉಕ್ಕೇರಿತು. ಶಿವನನ್ನು ದೈನ್ಯವಾಗಿ ನೋಡು ತ್ತಾ "ಸ್ವಾಮಿ, ನಾನೆಷ್ಟೋ ಭಕ್ತಿಯಿಂದ ನವರತ್ನಗಳನ್ನು ತಂದು ಪೂಜೆಮಾಡಿ ಹೋಗುತ್ತಿದ್ದರೆ ದುರ್ಮಾರ್ಗನು ಯಾರೋ ಪ್ರತಿದಿನವೂ ನನ್ನ ಪೂಜೆಯನ್ನು ಭಗ್ನಮಾಡಿ ನಿನ್ನಮೇಲೆ ಕಸಕಡ್ಡಿಗಳನ್ನು ಹಾಕಿ ಹೋಗು ತ್ತಿರುವನು. ನಿನ್ನ ಮೂರನೇ ಕಣ್ಣನ್ನು ತೆರೆದು ಅವನನ್ನು ಭಸ್ಮಮಾಡುವುದನ್ನು ಬಿಟ್ಟು ಹೀಗೆ ಸುಮ್ಮನಿರಬಹುದೇ?.... ಅಯ್ಯೋ, ಎಂತಹ ತಿಳಿಗೇಡಿ ನಾನು. ಪರ ಮೇಶ್ವರವಾದ ನಿನ್ನ ಕೈಯಲ್ಲಿ ಆಗದಿರುವು ದೆಂದರೇನು? ಕೈಯಲ್ಲಿ ಆದರೂ ಸುಮ್ಮ ನಿರುವೆ. ಭಕ್ತನಾದ ನನ್ನನ್ನು ತೊರೆದು, ನನ್ನ ಶತ್ರುವಾದ ಧೂರ್ತನಪಕ್ಷ ಸೇರಿ ಅವನು ಗಿಡಗೆಂಟೆಗಳನ್ನಿಟ್ಟರೂ ಸುಮ್ಮ ನಿರುವೆ. ನೀನು ಹೀಗೆ ಪ್ರತಿಪಕ್ಷವನ್ನು ಸೇರಲು ನಾನು ಮಾಡಿದ ಪಾಪವಾದರೂ ಏನು?" ಎಂದು ದುಃಖಪಟ್ಟನು. ಕೊನೆಗೆ ಮನವನ್ನು ಸ್ಥಿಮಿತಕ್ಕೆ ತಂದುಕೊಂಡು, ಆ ಎಲೆಗಳೆಲ್ಲವನ್ನೂ ಪಕ್ಕಕ್ಕೆ ಜರುಗಿಸಿ ಲಿಂಗದ ಮೇಲಿದ್ದ ಧೂಳನ್ನು ಬುಸ್ ಎಂದು ಊದಿ, ಸ್ಥಳವನ್ನು ಶುಭ್ರಮಾಡಿದನು. ತಾನು ತಂದಿದ್ದ ಮಣಿಗಳನ್ನಿಟ್ಟು ಪೂಜೆಮಾಡಿ ಸ್ವಸ್ಥಾನಕ್ಕೆ ಹೊರಟು ಹೋದನು. ಹೋದನೆಂಬ ಮಾತೇ ಹೊರತು ಅಂದು ರಾತ್ರಿ ಆತನಿಗೆ ನಿದ್ರೆ ಹತ್ತ ಲಿಲ್ಲ. 'ನನ್ನ ಪೂಜೆಯನ್ನು ಹಾಳುಮಾಡು ತ್ತಿರುವವನು ಯಾರು? ಅವನನ್ನು ಹಿಡಿಯು ವುದು ಹೇಗೆ?' ಎಂದು ಆಲೋಚಿಸುತ್ತಾ ಆತನು ರಾತ್ರಿಯೆಲ್ಲಾ ಜಾಗರಣೆ ಮಾಡಿದ.

ವಾಡಿಕೆಯಂತೆ ಶಿವಲಿಂಗದ ಹತ್ತಿರ ಆನೆ ಬಂತು. ತಾನಿಟ್ಟ ಪಕ್ರಿಗಳ ಸ್ಥಾನದಲ್ಲಿ ಕಲ್ಲು ಗಳಿರುವುದು ಕಾಣಿಸಿತು. ಆನೆಗೆ ಮೈ ಉರಿ ಯಿತು. "ನನ್ನೊಂದಿಗೆ ಜಗಳ ಕಟ್ಟಿಕೊಳ್ಳುವ ಮೂರ್ಖ ಯಾರು? ಅವನೇನೋ ಮೂರ್ಖ ನಾಗಿರಬಹುದು. ಆದರೆ ಅವನು ಎಸೆಯುವ ಈ ಕಲ್ಲುಗಳನ್ನು ನೀನು ಹೇಗೆ ಮೆಚ್ಚಿದೆ.... ಸ್ವಾಮಿ, ಈ ಪಚ್ಚೆ ನನ್ನ ಪತ್ರೆಗೆ ಸಾಟಿಯೇ? ಈ ಕೆಂಪು ನಾನು ತಂದು ಅರ್ಪಿಸುತ್ತಿರುವ ತಾವರೆ ಹೂಗಳ ಮುಂದೆ ಕೆಲಸಕ್ಕೆ ಬರು



ವುದೇ? ನಾನು ಸಮರ್ಪಿಸುತ್ತಿರುವ ಹೂ ಮತ್ತು ಪತ್ರೆಗಳಲ್ಲಿರುವ ಮೃದುತ್ವವಾಗಲೀ, ಪರಿಮಳವಾಗಲೀ, ಈ ಕಲ್ಲುಗಳಲ್ಲಿ ಇರುವುವೇ?" ಎಂದು ಸಾಲು ಪ್ರಶ್ನೆಮಾಡಿದ. 'ಇಂದೂಸಹ ಆ ಕಲ್ಲುಗಳನ್ನು ದೂರ ಎಸೆದು ಯಥಾಪ್ರಕಾರ ಪೂಜೆ ಮಾಡಿಕೊಂಡು ಹೋಗುವೆನು. ನಾಳೆಸಹ ಈ ಪೂಜೆ ಹಾಳಾಗಿತ್ತೋ ಅವನಿಗೆ ಕೊಡುತ್ತೇನೆ ಕೆಲಸ' ಎಂದು ನಿಶ್ಚಯಿಸಿ ಪೂಜೆ ಮುಗಿಸಿಕೊಂಡು ಹೊರಟುಹೋದ ಗಜರಾಜ. ಈ ವ್ಯಥೆಯಿಂದಲೇ ಗಜರಾಜನಿಗೆ ಅಂದು ರಾತ್ರಿ ನಿದ್ರೆ ಬರಲಿಲ್ಲ.

ಗಜರಾಜ ಹೋದಮೇಲೆ ನಾಗರಾಜ ಶಿವಲಿಂಗದ ಹತ್ತಿರ ಬಂದ. ಮತ್ತೆ ತನ್ನ ಪೂಜೆ ಹಾಳಾಗಿ ಹೋಗಿರುವುದನ್ನು ಕಂಡು ಆಕ್ರೋಶಗೊಂಡ. 'ಈ ಧೂರ್ತ ಯಾರೋ ಬೇಕೆಂತಲೇ ನನ್ನನ್ನು ಪರಾಭವ ಗೊಳಿಸುತಿದ್ದಾನೆ. ಆದ್ದರಿಂದ ಇಲ್ಲೇ ಬಚ್ಚಿಟ್ಟುಕೊಂಡಿದ್ದು ಅವನನ್ನು ತೀರಿಸಿದ ಹೊರತು ನಾನು ಮನೆಗೆ ಹೋಗಲಾರೆ ಇದು ಖಂಡಿತ. ಇದೇ ನನ್ನ ಶಪಥ' ಎಂದು ನಿರ್ಧಾರಮಾಡಿದ. ಆನೆಯಿಟ್ಟ ಪತ್ರೆ ಪುಷ್ಪಗಳನ್ನು ಹಿಂದಿನದಿನದಂತೆ ತೊಡೆದು ಹಾಕಲಿಲ್ಲ. ಮೆಲ್ಲನೆ ಆ ಪತ್ರೆಯ ರಾಶಿಯನ್ನು ಸೇರಿ ಸರ್ಪರಾಜನು ಅವಿತುಕೊಂಡನು.

ಎಂದಿನಂತೆ ಗಜರಾಜ ಬಂದ. ಇಷ್ಟು ದಿನದಂತೆ ತಾನಿಟ್ಟ ಪತ್ರೆಪುಷ್ಪಗಳು ಸ್ವಲ್ಪವೂ ಬದಲಾಯಿಸಿರಲಿಲ್ಲ. ಎಲ್ಲವೂ ಯಥಾಸ್ಥಿತಿಯಲ್ಲಿತ್ತು. ಎಂತಹ ಅದೃಷ್ಟ. 'ಈ ಕಲ್ಲು ತಂದಿಡುತ್ತಿದ್ದ ಮೂರ್ಖನೇನಾದ? ಸತ್ತು ಹೋಗಿರಬೇಕು. ಶಿವನೇ ನನ್ನನ್ನು ಕರುಣಿಸಲೋಸುಗ ಅವನನ್ನು ಕೊಂದಿರಬಹುದು' ಎಂದುಕೊಂಡ. ಸಂತೋಷದಿಂದ ಗಜರಾಜ ಪೂಜಾ ಮಾಲಿನ್ಯವನ್ನು ತೆಗೆಯಲು ತನ್ನ ಸೊಂಡಿಲನ್ನು ಪತ್ರೆಯ ಮೇಲಕ್ಕೆ ಚಾಚಿದನು.

ಒಳಗೆ ಬಚ್ಚಿಟ್ಟುಕೊಂಡಿದ್ದ ನಾಗರಾಜ ಇದನ್ನೆಲ್ಲಾ ನೋಡುತ್ತಲೇ ಇದ್ದ. 'ಇಷ್ಟು ದಿನದಿಂದ ನನ್ನ ಪೂಜೆ ನಾಶಮಾಡುತ್ತಿದ್ದುದು ನೀನೇಯೋ. ಸಿಕ್ಕಿದೆ ನೀನು. ನಿನ್ನ ಅವಸಾನಕಾಲ ಸಮೀಪಿಸಿದೆ. ಆದ್ದರಿಂದಲೇ

ಇಂದು ನೀನು ನನ್ನ ಕಣ್ಣಿಗೆ ಬೀಳುವಂತೆ ಶಿವನು ಅನುಗ್ರಹ ಮಾಡಿದ' ಎಂದು ಅಂದು ಕೊಂಡ. ತನ್ನಕಡೆ ಚಾಚಿದ ಆನೆಯ ಸೊಂಡಿಲ ಮುಖಾಂತರ ಆನೆಯ ಕುಂಭಸ್ಥಳ ವನ್ನು ಸೇರಿ ಒಳಗೆ ಸುತ್ತಾಡಲು ಪ್ರಾರಂಭಿಸಿದ.

ಇನ್ನೇನಿದೆ? ಮೆದುಳನ್ನು ಸೇರಿ ನಾಗ ರಾಜ ಆ ರೀತಿ ಚೆಲ್ಲಾಟವಾಡುತ್ತಿದ್ದರೆ ಗಜ ರಾಜನಿಗೆ ಬಾಧೆ ತಾಳಲಾರದಾಯಿತು. ಅತ್ತಿಂದಿತ್ತ ಓಡಾಡಲು ಷುರುಮಾಡಿದ. ಆ ಹಾವನ್ನು ಹೇಗಾದರೂ ಹೊರಗೆ ಬರುವಂತೆ ಮಾಡಲು ಸೊಂಡಿಲು ತುಂಬಾ ನೀರೆಳೆದುಕೊಂಡು ಮೂಗಿನಿಂದ ಸೇದಿದ. ನೀರು ಹೊರಗೆ ಬಂತೇ ಹೊರತು ಹಾವು ಬರಲಿಲ್ಲ. ಒಳಗೇ ಇತ್ತು. ಮರದ ಬುಡದ ಹತ್ತಿರ ಹೋಗಿ ಕುಂಭಸ್ಥಳವನ್ನು ತಿಕ್ಕಿದರೆ ಒಳಗಿರುವ ಹಾವು ಒತ್ತಡವನ್ನು ತಾಳಲಾರದೆ ಹೊರಗೆ ಬರುವುದೆಂದು ಆಶೆಪಟ್ಟ; ಆದರೆ ನಾಗರಾಜ ಒಳಗಿನಿಂದ ಕದಲಲೇ ಇಲ್ಲ.

ಇನ್ನು ಗಜರಾಜನಿಗೆ ಪ್ರಾಣದಮೇಲಿ ಆಶೆ ಹೋಯಿತು. 'ಈ ಹಾವು ನನ್ನ ಮೆದುಳನ್ನು ಸೇರಿ ತನ್ನ ವಿಷವನ್ನು ಕಾರಿ ನನ್ನನ್ನು ಹೇಗಿದ್ದರೂ ಸಾಯಿಸುವುದು ಖಂಡಿತ. ನನ್ನಮೇಲೆ ಕಕ್ಷಿ ಕಟ್ಟಿದ ಶತ್ರುವನ್ನು ಏಕಾದರೂ ಬದುಕಿಸಬೇಕು. ಇದನ್ನು ಸಾಯಿಸಿ ನಾನೂ ಸಾಯುವೆನು' ಎಂದು ನಿಶ್ಚಯಿಸಿಕೊಂಡ.



ಹಾವು ಎಲ್ಲಿಗೂ ಹೋಗದೆ ಒಳಗೆ ಅಲ್ಲಲ್ಲೇ ಸರಿದಾಡುತಿತ್ತು. ಗಜರಾಜ ವೇಗವಾಗಿ ಓಡುತ್ತಾ ಬಂದು ತನಗೆ ಎದುರಾಗಿದ್ದ ಬಂಡೆಗೆ ತನ್ನ ಕುಂಭಸ್ಥಳವನ್ನು ಡಿಕ್ಕಿ ಹೊಡೆದ. ಆ ಏಟಿಗೆ ಒಳಗಿದ್ದ ನಾಗರಾಜ ಜಜ್ಜಿಯಾಗಿ ಸತ್ತುಹೋದ. ತಲೆ ಒಡೆಯಿತು. ಆ ರಕ್ತದ ಮಡುವಿನಲ್ಲಿ ಗಜರಾಜನೂ ಹೆಣವಾಗಿ ಬಿದ್ದುಹೋದ.

* * *

ಪಾರ್ವತಿದೇವಿ ಗಂಡನ ಹತ್ತಿರ ಬಂದು ಗಜರಾಜ ಮತ್ತು ನಾಗರಾಜರು ಸತ್ತು ಬಿದ್ದಿರುವುದನ್ನು ನೋಡಿ ಆಶ್ಚರ್ಯದಿಂದ ಮೂಕಳಾದಳು. ಪರಮೇಶ್ವರ ಅವುಗಳ ಚರಿತ್ರೆ ಹೇಳಿದ. ಪಾರ್ವತಿದೇವಿ ಗಜ

ಮತ್ತು ನಾಗರಾಜರು ಮಹಾಭಕ್ತರೆಂದು ಮೆಚ್ಚಿಕೊಂಡಳು. ಪರಮೇಶ್ವರನು "ಮಹಾ ಭಕ್ತರೇ ಸರಿ. ಇದರಲ್ಲೇನೂ ಸಂಶಯವಿಲ್ಲ. ಆದರೆ ಇವರಿಬ್ಬರಿಗೂ ಒಬ್ಬರ ಮತವೆಂದರೆ ಮತ್ತೊಬ್ಬರಿಗೆ ಸರಿಬೀಳುತ್ತಿರಲಿಲ್ಲ. ಈರೀತಿ ದ್ವೇಷವಿರುವುದು ಕೆಟ್ಟದ್ದು. ಯಾರಿಗೆ ಯಾವ ರೀತಿ ಪೂಜೆ ಪ್ರೀತಿಯಾದರೆ ಆ ರೀತಿ ಮಾಡ ಬಹುದು. ಎಲ್ಲವಿಧವಾದ ಪೂಜೆಗಳನ್ನೂ ನಾನು ಮೆಚ್ಚುವೆನು. ಹಾವು ಮಾಡಿದ ಮಣಿ ಪೂಜೆ, ಆನೆ ಮಾಡಿದ ಪತ್ರೆ ಪೂಜೆ ನನಗೆ ಮೆಚ್ಚಿಕೆ ಆಯಿತು. ಈ ರಹಸ್ಯವನ್ನು ನಮ್ಮ ಭಕ್ತರು ಕಂಡುಕೊಳ್ಳದೆ ಒಬ್ಬರನ್ನೊಬ್ಬರು ಹಾಳುಮಾಡಿಕೊಂಡರು. ಅವರವರ ಮತ ವನ್ನು ಅವರು ಮನಃಪೂರ್ವಕವಾಗಿ ಅವ ಲಂಬಿಸಬೇಕೇ ಹೊರತು ಇತರ ಮತಗಳವ ರೊಂದಿಗೆ ಹೊಡೆದಾಟ ಮಾಡಕೂಡದು." ಪಾರ್ವತಿದೇವಿ ಹೌದೆಂದು ಒಪ್ಪಿಕೊಂಡಳು. ತರುವಾಯ ಪರಮೇಶ್ವರನು ಭಕ್ತರಿಬ್ಬರಿಗೂ ಮೋಕ್ಷವನ್ನಿತ್ತನು.

ಆ ಅಡವಿಯಲ್ಲಿ ಶಿವನು ಹುಟ್ಟಿದನೆಂದೂ ಸರ್ಪರಾಜ ಮತ್ತು ಗಜರಾಜರಿಗೆ ಮೋಕ್ಷ ವಿತ್ತನೆಂದೂ ಕ್ರಮವಾಗಿ ಎಲ್ಲರಿಗೂ ತಿಳಿ ಯಿತು. ಶಿವಭಕ್ತನಾದ ರಾಜನೊಬ್ಬನು ಆ ಅಡವಿಯನ್ನೆಲ್ಲಾ ಕಡಿಸಿ ಹಾಕಿ, ಅಲ್ಲೊಂದು ಶಿವಾಲಯವನ್ನು ಕಟ್ಟಿಸಿದನು. ಆ ಗುಡಿ ಸುತ್ತಲೂ ಒಂದು ಊರು ಬೆಳೆಯಿತು. ಆ ಊರಿನ ಹೆಸರೇ ಕಾಳಹಸ್ತಿ. 'ಕಾಳ' ಎಂ ದರೆ ಹಾವು, 'ಹಸ್ತಿ' ಎಂದರೆ ಆನೆ. ಹಾವು ಮತ್ತು ಆನೆಗಳಿಗೆ ಮೋಕ್ಷ ದೊರೆತ ಸ್ಥಳ ವಾದ್ದರಿಂದ ಅದಕ್ಕೆ ಕಾಳಹಸ್ತಿ ಎಂಬ ಹೆಸರು ಬಂತು.

ಇಂತಹ ಮಹಿಮೆಯುಳ್ಳ ಕಾಳಹಸ್ತಿ ಯಲ್ಲಿ ಸ್ವರ್ಣಮುಖಿ ಎಂಬ ನದಿ ಯಾತ್ರಿಕರ ಸ್ನಾನಪಾನಾದಿಗಳಿಗೆ ಆಧಾರವಾಗಿದೆ. ಇಲ್ಲಿ ಮಹಾ ಶಿವರಾತ್ರಿಯ ದಿನ ದೊಡ್ಡ ಜಾತ್ರೆ ನಡೆಯುವುದು. ಲಕ್ಷಾಂತರ ಜನ ಅಂದು ಈಶ್ವರನ ದರ್ಶನ ಪಡೆದು ಮುಕ್ತಿ ಹೊಂದು ತ್ತಿರುವರು.






ಒಬ್ಬ ರಾಜನಿಗೆ ಏಳುಜನ ಹೆಂಡತಿಯರು. ಆತನಿಗೆ ಬೇಕಾದುದೆಲ್ಲಾ ಇದ್ದರೂ ಮಕ್ಕಳು ಮಾತ್ರ ಇರಲಿಲ್ಲ. ಹೀಗಿರುವಲ್ಲಿ ಒಬ್ಬ ಯತೀಶ್ವರನು ಕಾಣಿಸಿಕೊಂಡ. ರಾಜನಿಗೆ ಮಂತ್ರಿಸಿದ ಆರು ಬಾಳೆ ಹಣ್ಣುಗಳನ್ನು ಕೊಟ್ಟ. ರಾಜ ಸಂತೋಷಪಟ್ಟ. ಆದರೆ ಹಣ್ಣುಗಳು ಮಾತ್ರ ಆರೇ ಇದ್ದುವು. ಆರು ಹಣ್ಣುಗಳನ್ನು ಏಳುಜನ ಸತಿಯರಿಗೆ ಹೇಗೆ ಹಂಚುವುದು? ಅದೃಷ್ಟವಶಾತ್ ಆ ಸಮಯದಲ್ಲಿ ಅರಮನೆಯಲ್ಲಿ ಆರ್ವರು ಪತ್ನಿಯರು ಮಾತ್ರವಿದ್ದರು. ಕಿರಿಯ ರಾಣಿ ಬಂಧುಗಳ ಮನೆಗೆ ಹೋಗಿದ್ದಳು. ಆಕೆ ಬಂದಮೇಲೆ ನೋಡಿಕೊಳ್ಳೋಣವೆಂದು ಆರು ಜನಕ್ಕೆ ಆರು ಹಣ್ಣುಗಳನ್ನು ಕೊಟ್ಟ.

ಇಷ್ಟರಲ್ಲಿ ಕಿರಿಯರಾಣಿ ಬಂದಳು. ತಾನಿಲ್ಲದ ಸಮಯದಲ್ಲಿ ಅವರೆಲ್ಲಾ ಸೇರಿ ಹೀಗೆ ಮಾಡಿದರಲ್ಲಾ ಎಂದು ಕೋಪ ಬಂತು. ಸಿಟ್ಟಿನ ಭರದಲ್ಲಿ ಅವರು ಬಿಸಾಡಿದ್ದ ಸಿಪ್ಪೆಯನ್ನು ತಿಂದುಬಿಟ್ಟಳು. ಅವಳನ್ನು ನೋಡಿ ಅವಳ ಸಹೋದರಿಯರು "ಏನಿದು. ಕೋತಿಯಂತೆ ಸಿಪ್ಪೆ ತಿನ್ನುತಿದ್ದಾಳೆ. ಇವಳಿಗೆ ಕೋತಿ ಮರಿ ಹುಟ್ಟುತ್ತೆ" ಎಂದು ಹಾಸ್ಯ ಮಾಡಿದರು. ಆರುಜನಕ್ಕೂ ಮುತ್ತಿನಂತಹ ಮಕ್ಕಳು ಹುಟ್ಟಿದರು. ಕಿರಿಯ ರಾಣಿಗೆ ಮಾತ್ರ ಕೋತಿ ಮರಿ ಹುಟ್ಟಿತು.

ಒಂದುದಿನ ಆರುಜನ ಮಕ್ಕಳೂ ತಂದೆಯ ಬಳಿಗೆ ಹೋಗಿ, ತಾವು ಹಡಗಿನಲ್ಲಿ ಪ್ರಪಂಚವನ್ನು ಸುತ್ತಿ ಬರುವೆವೆಂದು ಹೇಳಲು ರಾಜನು ಒಪ್ಪಿಗೆಯನ್ನಿತ್ತ. ಕಪಿರಾಜನು ತಾನೂ ಬರುವೆನೆಂದ. ಅದಕ್ಕೆ ಇತರರು ಸಾಧ್ಯವಿಲ್ಲವೆಂದು ಬೆದರಿಸಿದರು.

ಆಗ ಕಪಿರಾಜ ಏನು ಮಾಡಿದ ಗೊತ್ತೇ? ಯಾರಿಗೂ ತಿಳಿಯದಂತೆ ಎಲ್ಲರಿಗಿಂತ ಮೊದಲೇ ಹಡಗಿನ ಒಂದು ಮೂಲೆ ಸೇರಿಕೊಂಡ. ಹಡಗು ಹೊರಟಮೇಲೆ ಈ ವಿಷಯ ತಿಳಿದು ಅಣ್ಣಂದಿರು ಆಶ್ಚರ್ಯಪಟ್ಟರು.

ಒಂದು ವಾರ ಪ್ರಯಾಣವಾದಮೇಲೆ ಹಡಗು ತೀರ ಸೇರಿತು. ಆ ರಾಜ್ಯದಲ್ಲಿ ತುಂಬಾ ಕೋಲಾಹಲವಾಗಿತ್ತು. ಅದೇನೆಂದರೆ 'ತನ್ನ ಸಿಂಹಾಸನದ ಎದುರಾಗಿರುವ ಕಲ್ಲು ಬಂಡೆಯನ್ನು ಯಾರು ಎತ್ತುವರೋ ಅವರಿಗೆ ತನ್ನ ಮಗಳನ್ನು ಕೊಟ್ಟು ವಿವಾಹ

ವಿಶ್ವನಾಥಂ

ಮಾಡುವೆನು' ಎಂದು ಆ ದೇಶದ ರಾಜ ಒಂದು ಪ್ರಕಟನೆ ಹೊರಡಿಸಿದ್ದ.

ಆ ಪ್ರಕಟನೆ ಕಂಡು ಆರುಜನ ಅಣ್ಣ ತಮ್ಮಂದಿರು ಹೋಗಿ ಪ್ರಯತ್ನಮಾಡಿದರು. ಆದರೆ ಅದನ್ನು ಕದಲಿಸಲಾಗದೆ ಪೆಚ್ಚು ಮುಖ ಹಾಕಿದರು. ಆಗ ಕಪಿರಾಜ ದರ್ಬಾರಿಗೆ ಹೋಗಿ ಆ ಬ್ರಹ್ಮಾಂಡವಾದ ಬಂಡೆಯನ್ನು ಲೀಲಾಜಾಲವಾಗಿ ಎತ್ತಿದನು. ಎಲ್ಲರೂ ಮೆಚ್ಚಿಕೊಂಡರು.

ಕಪಿರಾಜನನ್ನು ವಿವಾಹವಾಗಲು ರಾಜಕುಮಾರಿಗೆ ಇಷ್ಟವಿರಲಿಲ್ಲ. ಆದರೆ ತಾನು ಹೊರಡಿಸಿದ ಪ್ರಕಟನೆ ಸುಳ್ಳಾಗದಂತೆ ರಾಜನು ಮಗಳನ್ನು ಒಪ್ಪಿಸಿದನು. ಮದುವೆ ನಡೆಯಿತು.

ತರುವಾಯ ಕಪಿರಾಜ ಪತ್ನಿಯೊಂದಿಗೆ ತಮ್ಮ ದೇಶಕ್ಕೆ ಹೊರಟ. ಹಡಗು ಹೋಗಿ ಹೋಗಿ ಬಂದು ದ್ವೀಪ ಸೇರಿತು. ಕಪಿರಾಜನಿಗೆ ಆ ದ್ವೀಪವನ್ನು ಆಳುವ ರಾಜಕುಮಾರಿ ಕಾಣಿಸಿದಳು. ಆಕೆ ಸುಂದರಿಯಷ್ಟೇ ಅಲ್ಲ. ಮಂತ್ರವಿದ್ಯೆಯಲ್ಲಿ ಪ್ರವೀಣೆ. ಆ ಕಪಿರಾಜನು ಸುಂದರನೆಂದೂ ಶಾಪದ ಮಹಿಮೆಯಿಂದ ಹೀಗಿರುವನೆಂದೂ ಗ್ರಹಿಸಿ, ಆತನನ್ನು ವಿವಾಹವಾಗಲು ಆಕೆ ನಿಶ್ಚಯಿಸಿಕೊಂಡಳು.

ಆಕೆ ತನ್ನ ಉದ್ದೇಶವನ್ನು ಕಪಿರಾಜನಿಗೆ ತಿಳಿಸಲು ಆತನು ಸಮ್ಮತಿಸಿದ. ಮದುವೆ ಮುಗಿಯಿತು. ಆಕೆಯನ್ನು ಸಂಗಡ ಕರೆದುಕೊಂಡು ಕಪಿರಾಜ ಹಡಗಿನ ಹತ್ತಿರ ಹೋದರೆ ಅಲ್ಲಿ ಹಿರಿಯರಾಣಿ ವ್ಯಾಕುಲದಿಂದಿದ್ದಳು. ಅದನ್ನು ಕಂಡು ಕಿರಿಯ ರಾಣಿ "ಅಕ್ಕ ಅಕ್ಕ, ನಿನ್ನ ವ್ಯಾಕುಲಕ್ಕೆ ಕಾರಣವೇನು? ನಿನ್ನ ಪತಿ ಕುರೂಪಿ ಅಂತಲೇ ಇಲ್ಲ ಮತ್ಯಾವುದಾದರೂ ಕಾರಣವಿದೆಯೇ?" ಎಂದು ಕೇಳಿದಳು. "ಅದಕ್ಕಿಂತಲೂ ಇನ್ನೇನು ಬೇಕು" ಎಂದು ಹಿರಿಯಾಕೆ ಹೇಳಲು ಕಪಿರಾಜನ ರಹಸ್ಯವನ್ನು ತಿಳಿಸಿ ಧೈರ್ಯವಾಗಿರುವಂತೆ ಹೇಳಿದಳು ಕಿರಿಯ ರಾಣಿ.

ಕಿರಿಯರಾಣಿಯ ಮಂತ್ರಶಕ್ತಿಯಿಂದ ಕಪಿರಾಜನ ಕಪಿಚರ್ಮ ಕಳಚಿ ಹೋಯಿತು. ಆತನು ಅಪೂರ್ವ ಸೌಂದರ್ಯದಿಂದ ಪ್ರಕಾಶಿಸುವ ರಾಜಕುಮಾರನಾಗಿ ಹೊಸ ರೂಪ ಪಡೆದುಕೊಂಡ.

(ಬರ್ಮೀ ಕಥೆಯೊಂದರ ಆಧಾರದಿಂದ)



# ಚಂದಮಾಮ ಸ್ಪರ್ಧೆ

(ಮಕ್ಕಳ ಭಾಷಾಭಿವೃದ್ಧಿಗೆ)

## ಆಧಾರಗಳು

* ಎಡದಿಂದ ಬಲಕ್ಕೆ *

2. ಇದು ಬಂದರೆ ಕತ್ತಲೆ ಮಾಯವಾಗುವುದು.
4. ಇದು ನೋಡಿದರೆ ಮರದಜಾತಿ ತಿಳಿಯಬಹುದು.
5. ಶತ್ರು.
7. ಚಲಿಸದಿರುವುದು.
8. ಆಕಾಶದ ಬಣ್ಣ.
9. ನಾಲಿಗೆಯಿಂದ ಇದು ತಿಳಿಯುತ್ತೇವೆ.
11. ಹೆತ್ತು ಹೊತ್ತು ಸಲಹಿದವಳು.
12. ನಾಲಿಗೆ.




* ಮೇಲಿನಿಂದ ಕೆಳಕ್ಕೆ *

1. ಸಂಗೀತಕ್ಕೆ ಇದು ಮುಖ್ಯ.
2. ಖರೀದಿ; ಕ್ರಯ.
3. ಉಣ್ಣೆ ಕೊಡುವ ಪ್ರಾಣಿ.
4. ಅಡ್ಡಿ, ಆತಂಕ, ಕಷ್ಟ
6. ಪುಣ್ಯವಂತಳು, ಪವಿತ್ರಳು.
10. ಎಂದೆಂದಿಗೂ, ಸರ್ವದಾ.
11. ಹಣಕ್ಕಿಂತ ಪ್ರಾಣ ಮುಖ್ಯ. ಪ್ರಾಣಕ್ಕಿಂತ ಇದು ಮುಖ್ಯ
13. ಮುಖಂಡರು ಭಾಷಣ ಕೊಡುವ ಸ್ಥಳ.

*

## ರಂಗೋಲಿ



ಕಮಲ

## ಒಗಟುಗಳು

ಇವುಗಳೇನು ಹೇಳಬಲ್ಲಿರಾ ?

1. ಆದಿನ, ಅಂತ್ಯನ,
   ಮಧ್ಯೆಯ ಇಹುದು
   ನಿನಗುಂಟು ನನಗುಂಟು
   ಎಲ್ಲರಿಗೂ ಬೇಕಿಹುದು

   ಜೆ. ರತ್ನಾಕರ.

2. ಅಜ್ಜ ತುಂಬಿಕೊಂಡಿದ್ದಾನೆ,
   ತಂದೆ ತಂದು ಹಾಕುತ್ತಾನೆ,
   ಮಗ ಕರ್ಚು ಮಾಡುತ್ತಾನೆ.
3. ನೀರಲ್ಲಿ ಹುಟ್ಟಿ, ನೀರಲ್ಲಿ ಬೆಳೆದು
   ನೀರು ಕಂಡರೆ ಹರಿದೋಡುವುದು.
4. ಪಚ್ಚೆಕಲ್ಲಿನ ಪ್ರಾಕಾರ,
   ಒಳಗೆ ಚಿನ್ನದ ಗುಡಿಗಳು
   ಅವುಗಳ ಮಧ್ಯೆ ಬೆಳ್ಳಿಯ ಲಿಂಗ.

   ಎನ್. ಕೆ. ಮೂರ್ತಿ, ಉಡಿಪಿ.




# ಮಕ್ಕಳ ಬೆಳವಣಿಗೆ

## ಸುನಡತೆ

ಆರೋಗ್ಯಕ್ಕೆ ಅವಶ್ಯಕವಾದ ಸಾಧನಗಳಲ್ಲಿ ಒಳ್ಳೆ ನಡತೆಯೂ ಬಹಳ ಮುಖ್ಯವಾದುದು. ಆದರೆ ಆರೋಗ್ಯಕ್ಕೂ, ಸೌಶೀಲಕ್ಕೂ ಇರುವ ಸಂಬಂಧವೇನು ? ಎಂದು ಕೌತುಕದಿಂದ ಕೇಳುವರು ಕೆಲವರು. ಸಾಕಷ್ಟು ನಂಬಿಕೆ ಇಲ್ಲದಿರುವುದರಿಂದಲೇ ನಡತೆಯನ್ನು ಕುರಿತು ಎಚ್ಚರಿಕೆ ವಹಿಸುವುದಿಲ್ಲ. ಕೆಟ್ಟ ಆಹಾರವು ಶರೀರಕ್ಕೆ ಎಷ್ಟು ಕೆಡಕು ಮಾಡುವುದೋ ಅದಕ್ಕಿಂತಲೂ ಹೆಚ್ಚಾಗಿ ಕೆಟ್ಟ ನಡತೆ ದೇಹಾರೋಗ್ಯವನ್ನು ಹಾಳುಮಾಡುವುದು. ಹೇಗೆಂದರೆ, ಒಂದು ಕೆಟ್ಟ ಕೆಲಸ ಮಾಡಿದಾಗ ಮನಸ್ಸು ಭಯದಿಂದ ತುಂಬಿರುತ್ತದೆ. ಆದ್ದರಿಂದಲೇ 'ಪಾಪವೆಲ್ಲಿರುವುದೋ ಅಲ್ಲಿ ಭಯವಿರುವುದು' ಎಂದರು ಹಿರಿಯರು. ಪಾಪಮಾಡದವನಿಗೆ ಭಯವೆಲ್ಲಿಯದು? ಮತ್ತು ಭಯದಿಂದ ನರಗಳ ಶಕ್ತಿ ಕುಗ್ಗುವುದು.

ಒಳ್ಳೆಯ ನಡತೆಯಿಂದ ಮಾನವನಿಗೆ ಆರೋಗ್ಯ. ಆತ್ಮಶಕ್ತಿ ಲಭಿಸುವುದು. ಒಂದು ಕೆಲಸ ಮಾಡಬೇಕಾಗಿದ್ದಲ್ಲಿ, ನಮಗೆ ಆತ್ಮಶಕ್ತಿ ಬೇಕು. ಆತ್ಮಶಕ್ತಿ ಒಳ್ಳೆಯ ನಡತೆಯಿಂದ ಬರುವುದು. ಆತ್ಮಶಕ್ತಿ ಎಂದರೆ ನಮಗೆ ತಿಳಿಯದೆ ಒಳಗೆ ಅಡಗಿರುವಂತಹ ಒಂದು ಅದ್ಭುತ ಬಲ. ಇಂತಹ ಬಲದಿಂದಲೇ ನಮ್ಮ ಪುರಾಣಪುರುಷರು ದೊಡ್ಡ ದೊಡ್ಡ ಕಾರ್ಯಗಳನ್ನು ಸಾಧಿಸಿದರು.

ಸನ್ನಡತೆಯಿಂದ ಸಂಕಲ್ಪಬಲ ಉಂಟಾಗುತ್ತದೆ. ಸಂಕಲ್ಪಬಲ ಬೇಕಾದರೆ ಆರೋಗ್ಯ ಅವಶ್ಯಕ. ಆದುದರಿಂದಲೇ ಯಾರೋ ಮಹಾನುಭಾವರು "ಹಣ ಹೋದರೇನೂ ಹಾಳಾಗುವುದಿಲ್ಲ. ಆರೋಗ್ಯ ಹೋದರೆ ಸ್ವಲ್ಪ ನಷ್ಟವಾದಂತೆ. ನಡತೆ ಕೆಟ್ಟಿತೋ ಸಮಸ್ತವೂ ಹಾಳಾದಂತೆಯೇ ಸರಿ" ಎಂದು ಹೇಳಿದರು.

ನಿಮ್ಮ ಅಕ್ಕ

---

## ★ ಚುಟಕಗಳು ★

ಹಿರಿಯದೊಂದು ಗಿರಿ
ಅಲ್ಲಿ ಇಲಿಯ ಮರಿ
ಕೊರೆದು, ಮಣ್ಣ
ನೆಳೆದು, ಬನ್ನ
ಪಡುತಲಿತ್ತು ಮರಿ.

ವನದಲೆಂದು ಬಿಲ
ಬಳಿಯೆ ಹರಿವ ಜಲ
ಹಾರಿ ಹೊಲ
ಜಿಗಿದು ಜಲ
ಓಡಿ ಬಂತು ಮೊಲ.

'ಸದಾರಾಮ'




ಮೇಲೆ ಕಾಣುವ ಒಂಬತ್ತು ಬೊಂಬೆಗಳಲ್ಲಿ ಎಲ್ಲವೂ ಒಂದೇ ತರಹ ಕಾಣುತ್ತವೆ. ಆದರೆ ಹಾಗಲ್ಲ. ಎಲ್ಲದರಲ್ಲಿಯೂ ಸ್ವಲ್ಪ ಸ್ವಲ್ಪ ವ್ಯತ್ಯಾಸವಿದೆ. ಎರಡು ಮಾತ್ರ ಒಂದೇ ವಿಧವಾಗಿವೆ. ಅವು ಯಾವುವು ಕಂಡು ಹಿಡಿಯುವಿಯಾ?

---

ಕಲಸಲ್ಪಟ್ಟ ಅಕ್ಷರಗಳನ್ನು ಜೋಡಿಸಿರಿ.

ಬ ದೆ ನ ಗ್ಗ ಒ ವಿ ಲ್ಲಿ ಟ್ಟ ಲ




## ಕಿತ್ತಲೇ ಹಣ್ಣಿನಲ್ಲಿ ನಾಣ್ಯ

ಇಂದ್ರಜಾಲಿಕನು ಆರು ಕಿತ್ತಲೆ ಹಣ್ಣುಗಳನ್ನು ತಂದು ಸಭಿಕರಿಗೆ ತೋರಿಸಿ ಇವೆಲ್ಲವೂ ಮಂತ್ರವಾದಿಗಳ ಹತ್ತಿರ ಇರುವ ವಿಚಿತ್ರವಾದ ಕಿತ್ತಲೆ ಹಣ್ಣುಗಳು. ಈ ಪ್ರತಿಯೊಂದು ಹಣ್ಣಿನಲ್ಲೂ ಒಂದೊಂದು ನಾಣ್ಯ ಇದೆ. ಬೇಕಾದರೆ ಪರೀಕ್ಷಿಸಿ ನೋಡಿ" ಎಂದು ಹೇಳುವನು.

ಕೆಲವರು ಸುಮ್ಮನಿರಲಾರದೆ ಕೆಲ ಹಣ್ಣುಗಳನ್ನು ಕೊಯ್ಯುವರು. ಅದರಲ್ಲಿ ಏನಾದರೂ ಇದ್ದರಲ್ಲವೆ? ಇನ್ನು ಮಾಡಬೇಕಾದ ತಮಾಷೆ ಎಲ್ಲವೂ ಈಗಲೇ. ಸಭೆಯಲ್ಲಿರುವ ಒಬ್ಬರಿಂದ ಒಂದು ನಾಣ್ಯ ತೆಗೆದುಕೊಳ್ಳಬೇಕು. 'ಈ ನಾಣ್ಯದ ಗುರುತು ಸರಿಯಾಗಿಟ್ಟುಕೊಳ್ಳಿ. ಬೇಕಾದರೆ ನೀವೇ ಸ್ವತಃ ಇಂದಿನ ತಾರೀಖನ್ನು ಹಾಕಿ' ಎಂದು ಧೈರ್ಯದಿಂದ ಹೇಳಿ, ಆ ನಾಣ್ಯವನ್ನು ತೆಗೆದುಕೊಂಡು ಯಾವುದಾದರೂ ತಿಳಿದಿರುವ ಪದ್ಧತಿಯಂತೆ ಇಂದ್ರಜಾಲಕಾರನು ಅದನ್ನು ಮಾಯಮಾಡಬೇಕು. (ಇಂತಹ ವಸ್ತುಗಳನ್ನು ಮಾಯಮಾಡುವ ರೀತಿ ನಿಮಗೆ ತಿಳಿದಿರಬೇಕೆಂದು ಭಾವಿಸಿ ಇಲ್ಲಿ ವಿವರಿಸಲಿಲ್ಲ. ಇನ್ನುಮುಂದೆ ಪ್ರೊಫೆಸರ್ ಅವರು ಆ ಸೂಕ್ಷ್ಮ ಪದ್ಧತಿಗಳನ್ನೆಲ್ಲಾ ವಿವರಿಸುವರು)



ಈಗ ಸಭಿಕರೊಬ್ಬರನ್ನು ಒಂದು ಕಿತ್ತಲೆ ಹಣ್ಣನ್ನು ಆರಿಸಿಕೊಳ್ಳುವಂತೆ ಹೇಳುವನು. ಅವರು ತೆಗೆದುಕೊಂಡ ಹಣ್ಣನ್ನು ಎರಡು ಭಾಗಮಾಡಿದಕೂಡಲೇ ಸಭಿಕನ ನಾಣ್ಯ ಹಣ್ಣಿನಲ್ಲಿ ಕಂಡು ಎಲ್ಲರೂ ಅಚ್ಚರಿ ಪಡುವರು (ಚಿತ್ರ ಒಂದು)





ಈ ಯುಕ್ತಿ ನೋಡಿ 'ಎಲ ಎಲಾ, ಇವನು ಹೇಗೆ ಮಾಡಿದ? ಏನಾದರೂ ಮಾಟವೋ ಮಹಾತ್ಮೆಯೋ' ಎಂದುಕೊಳ್ಳುವರು ನೋಟಕರು. ಆದರೆ ಈ ರಹಸ್ಯ ತಿಳಿದ ತರುವಾಯ 'ಇಷ್ಟೇಯೇ, ಎಂದು ಉದ್ಗಾರ ತೆಗೆಯುವರು. ಈ ರಹಸ್ಯ ತಿಳಿದ ಮೇಲೆ ಇಷ್ಟು ಸುಲಭವಾದ ಮೋಡಿ ಬೇರೊಂದಿಲ್ಲ ಎನ್ನಿಸುವುದು. ಈ ಯುಕ್ತಿಯ ಮಹಿಮೆ ಯೆಲ್ಲಾ ಇಂದ್ರಜಾಲಿಕನು ಉಪಯೋಗಿಸುವ ಚಾಕುವಿನಲ್ಲಿದೆ.

ಎರಡನೇ ಚಿತ್ರ ನೋಡಿದರೆ ಈ ಒಗಟು ಸ್ಪಷ್ಟವಾಗಿ ತಿಳಿಯುತ್ತದೆ. A ಎಂಬುದು B ಎಂಬ ನಾಣ್ಯವನ್ನು ಚಾಕುವಿಗೆ ಅಂಟಿಕೊಂಡಿರುವಂತೆ ಹಿಡಿಯುವ ಸ್ಪ್ರಿಂಗ್. C ಎಂಬುದು ಸ್ಪ್ರಿಂಗ್ ಅನ್ನು ಒತ್ತುವ ಸ್ಥಳ. ಹಣ್ಣನ್ನು ಕುಯ್ಯುವಾಗ ಚಾಕುವಿನ ಅರ್ಧ ಭಾಗ ಒಳಗೆ ಹೋದಕೂಡಲೇ C ಎಂಬ ಸನ್ನೆಯನ್ನು ಅಮುಕಬೇಕು. ಅಮುಕಿದ ಕೂಡಲೇ ಚಾಕುವಿನ ಅಲಗಿಗೆ ಅಂಟಿದಂತಿರುವ ನಾಣ್ಯವು ಬಿಡಿಸಿಕೊಂಡು, ಹಣ್ಣಿಗೆ ಅಂಟಿಕೊಳ್ಳುವಂತೆ ಮಾಡುವುದು. ಚಾಕುವಿಗೆ ನಾಣ್ಯವು ಅಂಟಿಕೊಂಡಿರುವ ಕಡೆ ಅಲಗನ್ನು ಇಂದ್ರಜಾಲಿಕನು ತನ್ನ ಕಡೆ ಇರುವಂತೆ ಜಾಗರೂಕತೆ ವಹಿಸಬೇಕು. ಇಲ್ಲದಿದ್ದರೆ ರಹಸ್ಯ ಸಭೆಗೆ ತಿಳಿದುಬಿಡುವುದು.

ಇದನ್ನು ವಿವರಿಸುತ್ತಿದ್ದರೆ ಕಲಕತ್ತೆಯಲ್ಲಿ ಒಂದುಸಾರಿ ನಡೆದ ವಿಷಯ ಜ್ಞಾಪಕಕ್ಕೆ ಬರುತ್ತದೆ. ನಮ್ಮ ಮನೆಗೆ ಹತ್ತಿರದಲ್ಲೇ ಹಣ್ಣಿನ ಅಂಗಡಿಗಳಿದ್ದವು. ಒಬ್ಬ ವರ್ತಕನ ಹತ್ತಿರ ಹೋಗಿ 'ಅಣ್ಣಾ, ಕಿತ್ತಲೇ ಹಣ್ಣು ಡರ್ಜ ಹೇಗೆ. ಅಗ್ಗವಾದ ದ್ದಾರೆ ಹೇಳು' ಎಂದೆ. ಆತ ಕೇಳಿದಷ್ಟು ಹಣ ತೆತ್ತು ಆರು ಹಣ್ಣುಗಳನ್ನು ಕೊಂಡುಕೊಂಡೆ.




ಹಣ್ಣುಗಳು ಕೈಗೆ ಬಂದ ತರುವಾಯ 'ಲೋ ಅಪ್ಪಾ, ಇವುಗಳನ್ನು ನನಗೆ ಮಾರಿದ್ದರಿಂದ ನೀನು ಬಹಳ ನಷ್ಟಕ್ಕೆ ಗುರಿಯಾದೆ ಕಂಡೆಯಾ' ಎಂದೆ. ಆತನಿಗೆ ಒಂದು ಹಣ್ಣು ಕೊಯ್ದು ತೋರಿಸಿದೆ. ಅದರಲ್ಲಿ ನಾಲ್ಕಾಣೆ ನಾಣ್ಯ ಇತ್ತು. ಮಿಕ್ಕ ಹಣ್ಣುಗಳನ್ನು ಅದೇ ರೀತಿ ಕೊಯ್ದು ತೋರಿಸಿದೆ. ಎಲ್ಲದರಲ್ಲೂ ಪಾವಲಿ ಬಿಲ್ಲೆಗಳು ಕಾಣಿಸಿದವು. ಆತ ದಂಗುಬಡಿ ಮಿಕಮಿಕನೆ ನೋಡಿದ. ತರುವಾಯ ತನ್ನ ಹತ್ತಿರವಿದ್ದ ಮಿಕ್ಕ ಹಣ್ಣುಗಳನ್ನು ಮಾರುವುದು ನಿಲ್ಲಿಸಿ ಒಂದೊಂದೇ ಹಣ್ಣನ್ನು ಸುಲಿದು ನೋಡಲು ಪ್ರಾರಂಭಿಸಿದ.

# ದೋಸೆಯ ಆಸೆ

ಒಂದೂರಿನಲ್ಲಿ ಒಬ್ಬ ಬ್ರಾಹ್ಮಣನಿದ್ದ. ಅವನ ಹೆಸರು ಸುಬ್ಬಯ್ಯ. ಹೆಂಡತಿ ಹೆಸರು ಸುಬ್ಬಮ್ಮ. ಸುಬ್ಬಯ್ಯನಿಗೆ ದೋಸೆಮಾಡಿ ತಿನ್ನಬೇಕೆಂದರೆ ಬಹಳ ಆಸೆ. ಸುಬ್ಬಮ್ಮನಿಗೆ ಅದಕ್ಕೆ ಎರಡರಷ್ಟು ಆಸೆ. ಆದರೆ ಅವರ ಹತ್ತಿರ ಒಂದು ಕಿಲುಬುಕಾಸೂ ಇಲ್ಲ. ಹೇಗಾದರೂ ದೋಸೆ ಮಾಡಲೇಬೇಕೆಂದು ಸುಬ್ಬಯ್ಯ ಹೆಂಡತಿಯನ್ನು ಪೀಡಿಸಿದ. ಅವಳೇನು ತಾನೇ ಮಾಡಿಯಾಳು? "ತಪಸ್ಸು ಮಾಡಿ ದೋಸೆ ಸಂಪಾದಿಸಿಕೊಳ್ಳಿ" ಎಂದು ಹೇಳಿಬಿಟ್ಟಳು.

ಇದನ್ನು ಕೇಳಿ ಅವನು ತಪಸ್ಸಿಗೆ ಕುಳಿತೇಬಿಟ್ಟ. ಎಷ್ಟೋವರ್ಷ ಕಾಲ ತಪಸ್ಸು ಮಾಡಿದನಂತರ ಈಶ್ವರ ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾದ. ಸುಬ್ಬಯ್ಯ ಏನು ಹೇಳುವುದಕ್ಕೂ ತೋಚದೆ, "ನನಗೆ ಯಾವಾಗಲೂ ದೋಸೆ ತಿನ್ನಬೇಕೆಂದು ಬಹಳ ಆಸೆ" ಎಂದುಬಿಟ್ಟ. ಈಶ್ವರ ಮುಗುಳ್ನಗೆ ನಗುತ್ತಾ, ಆರುಕಾಸಿನ ಬಿಲ್ಲೆಯನ್ನು ಕೊಟ್ಟು ಮಾಯವಾದ. ಸುಬ್ಬಯ್ಯ 'ಆರುಕಾಸಿನ ಬಿಲ್ಲೆಯಲ್ಲಿ ಏನು ಮಾಡುವುದು' ಎಂದು ಯೋಚಿಸುತ್ತಾ ಮನೆಗೆ ಬಂದ. ಸುಬ್ಬಯ್ಯ ಹೆಂಡತಿಗೆ ಎಲ್ಲ ವಿಷಯವನ್ನೂ ಹೇಳಿದ. ಅವಳು "ಅಷ್ಟು ತಪಸ್ಸು ಮಾಡಿ ಇಷ್ಟೇನೆ ತಂದದ್ದು?" ಎಂದಳು. ಸುಬ್ಬಯ್ಯ ಹಿಟ್ಟು ಎಣ್ಣೆ ಮುಂತಾದ ಸಾಮಾನು ತರಲು ಅಂಗಡಿಗೆ ಹೋದ. ಅಂಗಡಿಯವನಿಗೆ 6 ಕಾಸು ಬಿಲ್ಲೆ ಕೊಟ್ಟರೆ ಮತ್ತೊಂದು ಬಿಲ್ಲೆ ಕೈಯಲ್ಲಿ ಇರುತ್ತಿತ್ತು. ಅದನ್ನು ಕೊಟ್ಟರೆ ಇನ್ನೊಂದು. ಹೀಗೆ ಅಕ್ಷಯವಾಗಿತ್ತು. ಸುಬ್ಬಯ್ಯ ತನ್ನ ಅದೃಷ್ಟ ತಿಳಿದುಕೊಂಡ. ದೋಸೆ ಸಾಮಾನೆಲ್ಲ ಕೊಂಡು ಒಂದು ಗಂಟು ಕಟ್ಟಿ ತಲೆ ಮೇಲೆ ಹೊತ್ತುಕೊಂಡು ಮನೆಗೆ ಬಂದ. ತಲೆಮೇಲಿದ್ದ ಗಂಟನ್ನು ಉಸ್ ಎಂದು ತೆಗೆದಿಟ್ಟ. ತೆಗೆದಿಟ್ಟರೆ ಇನ್ನೊಂದು ಗಂಟಿದೆ. ಅದನ್ನೂ ತೆಗೆದಿಟ್ಟರೆ ಇನ್ನೊಂದು ಗಂಟಿದೆ. ಹೀಗೆ ಗಂಟೂಕೂಡ ಅಕ್ಷಯವಾಗುತ್ತಲೇ ಇತ್ತು. ಯಾವಾಗಲೂ ತಲೇ ಮೇಲೆ ಗಂಟು ಕೈಲಿ ಆರು ಕಾಸು ಇದ್ದೇ ಇರುತಿತ್ತು. 'ಈ ಹೊಸ ಸಮಸ್ಯೆ ಹೇಗೆ ಬಿಡಿಸುವುದು' ಎಂದು ಸುಬ್ಬಯ್ಯ ಯೋಚಿಸುತ್ತಾ ಕುಳಿತ. ಸುಬ್ಬಮ್ಮ ಮಾತ್ರ ಸಂಭ್ರಮದಿಂದ ಬೇಕಾದಷ್ಟು ಹಿಟ್ಟು ಕಲೆಸಿ ದೋಸೆ ಹುಯ್ಯಲು ಶುರುಮಾಡಿದಳು. ಕಾವಲಿಮೇಲಿಂದ ದೋಸೆ ಒಂದು ತೆಗೆದರೆ ಇನ್ನೊಂದು ದೋಸೆ ಸಿದ್ಧ. ಹೀಗೆ ತೆಗೆದು ತೆಗೆದು ಸುಬ್ಬಮ್ಮನಿಗೆ ಸಾಕಾಗಿ ಹೋಯಿತು. ಆ ಸಮಯಕ್ಕೆ ಸರಿಯಾಗಿ ಸುಬ್ಬಯ್ಯ ಬಂದ. ಬಹಳ ಆಸೆಯಿಂದ ಒಂದು ದೋಸೆಯನ್ನು ಬಾಯಿಗೆ ಒಟ್ಟಿಗೆ ಹಾಕಿಕೊಂಡು ಬಿಟ್ಟ.

ಅದನ್ನು ನೋಡಿ ಸುಬ್ಬಮ್ಮನೂ ಎರಡು ದೋಸೆ ಬಾಯಿಗೆ ಹಾಕಿಕೊಂಡು ಬಿಟ್ಟಳು. ಇಬ್ಬರೂ ಅಗಿದು ನುಂಗಿದರು. ಎಷ್ಟು ನುಂಗಿದರೂ ಇನ್ನೊಂದು ದೋಸೆ ಬಾಯಲ್ಲೇ ಇರುತಿತ್ತು. ಸುಬ್ಬಯ್ಯನಿಗೆ ಕೈಯ್ಯಲ್ಲಿ ಆರುಕಾಸು ತಲೆಯಲ್ಲಿ ಒಂದು ಗಂಟು ಬಾಯಲ್ಲಿ ಒಂದು ದೋಸೆ. ಹೀಗೆ ಆಯಿತು ಗತಿ. ಸುಬ್ಬಯ್ಯ ಯಾಕಾಗಿ ದೇವರನ್ನು ದೋಸೆ ಕೇಳಿದೆನೋ ಎಂದು ಪೇಚಾಡಿದ. ಕಡೆಗೆ ದೇವರನ್ನು ನಿನ್ನ ಆರುಕಾಸೂ ಬೇಡ, ದೋಸೆನೂ ಬೇಡ' ಎಂದು ಮನಸ್ಸಿನಲ್ಲಿ ಸ್ಮರಿಸಿದ. ಕೂಡಲೇ ಈಶ್ವರ ನಗುತ್ತಾ ದೋಸೆಯನ್ನೂ ಆರು ಕಾಸನ್ನೂ ಗಂಟನ್ನೂ ಮಾಯಮಾಡಿದ. ಸುಬ್ಬಯ್ಯ ಸಂತೋಷದಿಂದ ಸುಬ್ಬಮ್ಮನನ್ನು ನೋಡಿದ. ಸುಬ್ಬಮ್ಮನ ಬಾಯಲ್ಲೂ ದೋಸೆ ಮಾಯವಾಗಿತ್ತು. ಆಮೇಲೆ ಇವರಿಬ್ಬರೂ ಉಳಿದ ದೋಸೆಗಳನ್ನು ತಿಂದು ಸಂತೋಷದಿಂದ ಹೆಚ್ಚು ಆಸೆ ಪಡದೆ ಸುಖವಾಗಿದ್ದರು.

—ಎಂ. ಟಿ. ರಂಗನಾಯಕಿ.

## ಕಳ್ಳನ ಪತ್ತೆ



ಈ ದೊಡ್ಡ ಚದರದಲ್ಲಿ ಅನೇಕ ಚಿಕ್ಕ ಚಿಕ್ಕ ಮನೆಗಳಿವೆ. ಕೆಲವು ಮನೆಗಳ ಮಧ್ಯ ಚುಕ್ಕಿಗಳು ಕಾಣಿಸುತ್ತಿವೆ. ಎಷ್ಟೋ ಮನೆಗಳಲ್ಲಿ ಚುಕ್ಕಿ ಇಲ್ಲ. ಚುಕ್ಕಿಗಳುಳ್ಳ ಮನೆಗಳನ್ನು ಮಾತ್ರ ಬಣ್ಣದ ಪೆನ್ಸಿಲಿನಿಂದ ಬಣ್ಣ ತುಂಬಿರಿ. ಆಗ ಮರೆಸಿಕೊಂಡಿರುವ ಕಳ್ಳ ತಾನೇ ಸಿಕ್ಕಿಸ್ತಾನೆ.




### ಒಗಟುಗಳಿಗೆ ಉತ್ತರ

1. ನಯನ.
2. ಹಂಡೆ—ಅಜ್ಜ.
   ಕೊಡ— ತಂದೆ
   ತಂಬಿಗೆ—ಮಗ.
3. ಉಪ್ಪು. 4. ಹಲಸಿನ ಹಣ್ಣು.

### ಚಿತ್ರದೊಗಟಿನ ಉತ್ತರ

1, 9 ನೇ ಚಿತ್ರಗಳು ಒಂದು.

ಅಕ್ಷರ ಜೋಡಣೆ: ಒಗ್ಗಟ್ಟಿನಲ್ಲಿ ಬಲವಿದೆ.



CHITRA

ಈ ಚಿತ್ರಕ್ಕೆ ಎಲ್ಲೆಲ್ಲಿ ಯಾವ ಬಣ್ಣಗಳನ್ನು ಹಾಕಬೇಕೋ ನೋಡಿ ಹಾಕಿರಿ

# ಹಿಂದಿ ಎಂಟನೆ ಪಾಠ

यह बाजार है।
दोनों तरफ दूकानें हैं।
वहाँ एक आदमी केले बेच रहा है।
एक औरत केले खरीद रही है।
सड़क पर बहुत लोग जा रहे हैं।
बहुत लोग आ रहे हैं।
मोटरें और ट्राम-गाडियाँ चल रही हैं।

राम बाजार जा रहा है।
रमणी भी जा रही है।
राम एक दूकान पर खड़ा है।
वह एक कलम खरीद रहा है।
रमणी दवात का दाम पूछ रही है।
दूकानदार कलम दिखा रहा है।
रमणी और राम देख रहे हैं।

साँझ हो रही है।
सूरज डूब रहा है।
रमणी और राम भी घर लौट रहे हैं।

बाजार = ಪೇಟೆ, ಅಂಗಡಿಬೀದಿ
दोनों तरफ = ಎರಡು ಕಡೆಯೂ
दूकान = ಅಂಗಡಿ
आदमी = ಮನುಷ್ಯ
केला = ಬಾಳೆ ಹಣ್ಣು
बेच = ಮಾರುವುದು
खरीद = ಕೊಂಡುಕೊಳ್ಳುವುದು
औरत = ಸ್ತ್ರೀ
सड़क = ಬೀದಿ, ರಸ್ತೆ
बहुत = ಬಹಳ, ಅನೇಕ
लोग = ಜನರು
सब = ಎಲ್ಲಾ

गाडी = ಗಾಡಿ, ಬಂಡಿ
खड़ा = ನಿಂತಿರುವುದು, ನಿಲ್ಲುವುದು
दाम = ಬೆಲೆ, ಕ್ರಯ
पूछ = ಕೇಳು
दूकानदार = ಅಂಗಡಿಯವ
दिखा = ತೋರಿಸು
देख = ನೋಡು
साँझ = ಸಾಯಂಕಾಲ, ಸಂಜೆ
हो = ಆಗು
सूरज = ಸೂರ್ಯ
डूब = ಮುಳುಗು
लौट = ಹಿಂತಿರುಗು

**रह** ಎಂದರೆ 'ಇರು' ಎಂದರ್ಥ ಆಗುತ್ತದೆ. ತಾತ್ಕಾಲಿಕ ವರ್ತಮಾನಕಾಲದ ವಾಕ್ಯಗಳಲ್ಲಿ ಇದನ್ನು ಉಪಯೋಗಿಸಬೇಕು. (ಉದಾ. ಮೇಲಿರುವ ವಾಕ್ಯಗಳನ್ನು ಓದಿರಿ) ಈಗ ನಡೆಯುತ್ತಿರುವ ಕೆಲಸವನ್ನು ಅದು ಸೂಚಿಸುತ್ತದೆ. (**बेच रहा है**=ಮಾರುತ್ತಾ ಇದ್ದಾನೆ. **आ रहा है** = ಬರುತ್ತಿದ್ದಾನೆ.) ಇದರಲ್ಲಿ ಕರ್ತೃವು ಏಕವಚನ ಪುಲ್ಲಿಂಗವಾದರೆ ಧಾತುರೂಪಕ್ಕೆ **रहा है** ಎಂದೂ, ಸ್ತ್ರೀಲಿಂಗವಾದರೆ **रही है** ಎಂದೂ, ಬಹುವಚನ ಪುಲ್ಲಿಂಗಕ್ಕೆ **रहे हैं** ಎಂದೂ, ಸ್ತ್ರೀಲಿಂಗಕ್ಕೆ **रही हैं** ಎಂದೂ ಸೇರಿಸಬೇಕು. ಹಿಂದಿಯಲ್ಲಿ ಅಕಾರಾಂತ ಪುಲ್ಲಿಂಗ ಏಕವಚನ ಶಬ್ದಗಳಿಗೆ ಅಕಾರಾಂತ ಏಕವಚನ ಸ್ತ್ರೀಲಿಂಗ ಶಬ್ದಗಳಿಗೆ ಏತ್ವ ಸೇರಿಸಿದರೆ ಬಹುವಚನವಾಗುತ್ತವೆ. ಈಕಾರಾಂತ ಸ್ತ್ರೀಲಿಂಗ ಶಬ್ದವು ಬಹುವಚನವಾಗಬೇಕಾದರೆ ಈಕಾರ ಹೋಗಿ **इयाँ** ಸೇರುತ್ತದೆ.

*

## ಏಜೆಂಟರುಗಳು ಬೇಕು

ಏಜೆಂಟರುಗಳಿಲ್ಲದ ದೊಡ್ಡ ಪುಟ್ಟ ಹಳ್ಳಿಗಳಲ್ಲಿ ಚಂದಮಾಮನ ಮಾರಾಟಗಾರರು ರೂ. ೨-೦-೦ ಮಾತ್ರ ಕಳಿಸಿ ೭ ಪ್ರತಿಗಳನ್ನು ಪಡೆದು ರೂ. ೦-೧೦-೦ ಗಳ ಲಾಭವನ್ನು ಪಡೆಯಬಹುದು. ೧೫ರಿಂದ ೨೦ನೇ ತಾರೀಖಿನ ಒಳಗಾಗಿ ರೂ. ೨-೦-೦ನ್ನು ಮನಿಯಾರ್ಡರು ಕಳಿಸಿ ನಿಮ್ಮ ೭ ಪ್ರತಿಗಳನ್ನು ಪಡೆಯಿರಿ.

ಬಿಡಿ ಸಂಚಿಕೆ ಪ್ರತಿ ಒಂದಕ್ಕೆ

**ರೂ. ೦-೬-೦ ಮಾತ್ರ.**

* ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

CHANDAMAMA OFFICE
P. B. 1686, MADRAS—1.

# ಚಂದಮಾಮ

ನಾಲ್ಕು ಭಾಷೆಗಳಲ್ಲಿ

ಕನ್ನಡ, ತೆಲುಗು, ತಮಿಳು ಮತ್ತು ಹಿಂದಿ

ಯಾವ ಭಾಷೆಯಲ್ಲೇ ಆಗಲಿ

**ಬಿಡಿ ಪ್ರತಿ ರೂ. ೦—೬—೦**

**ವಾರ್ಷಿಕ ಚಂದಾ ರೂ. ೪—೮—೦**



ಇಂದೇ ಚಂದಾದಾರರಾಗಿರಿ














UMA 607 Stone Ring Rs 2-12-0

UMA 723 Stone Button Rs 1-0-0

# 500 ರೂಪಾಯಿಗಳ ಬಹುಮಾನ

## ಉಮಾ ಗೋಲ್ಡ್ ಕವರಿಂಗ್ ವರ್ಕ್ಸ

ಉಮಾ ಮಹಲ್ :: ಮಚಲೀಪಟ್ಟಣ

ಉಮಾ ಗೋಲ್ಡ್ ಕವರಿಂಗ್ ವರ್ಕ್ಸ ಫೋಸ್ಫಾಫೀಸ್ ಅಪ್ಪಟ ಬಂಗಾರದ ರೇಕನ್ನು ಲೋಹದ ಮೇಲೆ ಅಂಟಿಸಿ (Gold Sheet Welding on Metal) ತಯಾರು ಮಾಡುತ್ತೇವೆ. ಅಲ್ಲವೆಂದು ರುಜುವಾತು ಮಾಡಿದವರಿಗೆ ರೂ. 500 ಬಹುಮಾನ ಕೊಡುತ್ತೇವೆ. ನಾವು ತಯಾರಿಸಿ ಕಳಿಸುವ ಪ್ರತಿ ವಸ್ತು ಮತ್ತು ಪ್ಯಾಕಿಂಗಿನ ಮೇಲೆ "ಉಮಾ" ಎಂಬ ಇಂಗ್ಲೀಷು ಅಕ್ಷರದ ಗುರುತನ್ನು ನೋಡಿ ತೆಗೆದುಕೊಳ್ಳಿ. ಹತ್ತು ವರ್ಷಗಳ ಗ್ಯಾರಂಟಿಯುಂಟು.

ಇದನ್ನು ಪರೀಕ್ಷೆ ಮಾಡಲಿಚ್ಛಿಸುವವರು ಉಮಾ ಆಭರಣಗಳನ್ನು ಮಹಾ ದ್ರಾವಕದಲ್ಲಿ ಇಟ್ಟ 5 ನಿಮಿಷದಲ್ಲೇ ಬಂಗಾರದ ರೇಕು ಲೋಹದಿಂದ ಬೇರೆಯಾಗಿ ಬರುತ್ತದೆ. ಹೀಗೆ ಪರೀಕ್ಷೆ ಮಾಡಿದ ಅನೇಕ ಮಹನೀಯರು ನಮಗೆ ಸರ್ಟಿಫಿಕೇಟುಗಳನ್ನು ಕೊಟ್ಟಿರುವರು. 800 ಡಿಸೈನುಗಳುಳ್ಳ ನಮ್ಮ ಕ್ಯಾಟಲಾಗು ಉಚಿತವಾಗಿ ಕಳುಹಿಸುತ್ತೇವೆ.

ಇತರ ದೇಶಗಳಿಗೆ ಕ್ಯಾಟಲಾಗು ದರಕ್ಕೆ 25% ಅಧಿಕ ಬೆಲೆಯಾಗುತ್ತೆ.

*N. B.*- ವಸ್ತುಗಳ ವಿ. ಪಿ. ಪಾರ್ಸಲು ಛಾರ್ಜು ರೂ. 0-15-0

Tel. : "UMA", Masulipatam.

## * ಲಾಭ ಪಡೆಯಿರಿ *

ವ್ಯಾಪಾರಿಗಳು ಮತ್ತು ಜಾಹೀರಾತು ಕೊಡುವವರಿಗೆ ಸದವಕಾಶ ಕರ್ನಾಟಕದ ಸರ್ವಪ್ರದೇಶಗಳಲ್ಲಿಯೂ ಅತಿ ಉತ್ತಮ ಸಂಖ್ಯೆಯಲ್ಲಿ ಪ್ರಚಾರಗೊಂಡಿರುವ, ಪ್ರತಿ ತಿಂಗಳೂ ೬೦ ಸಾವಿರಕ್ಕೂಮಿಾರಿ ಎಲ್ಲಾ ವರ್ಗದ ಬಾಲ, ಯುವ, ಮತ್ತು ವೃದ್ಧರ ಕಣ್ಮನಗಳನ್ನು ತಣಿಸುವ, ಜನಪ್ರಿಯ ಚಂದಮಾಮದಲ್ಲಿ ಜಾಹೀರಾತು ಕೊಡುವವರಿಗೆ ವಿಶೇಷ ಪ್ರಯೋಜನವುಂಟು. ಈ ಅವಕಾಶ ಕಳೆದುಕೊಳ್ಳಬೇಡಿ. ಜಾಹೀರಾತು ದರಗಳ ವಿವರಗಳಿಗೆ ಈ ವಿಳಾಸಕ್ಕೆ ಬರೆಯಿರಿ.

*Manager :*

**CHANDAMAMA PUBLICATIONS**

P. B. 1686, MADRAS—1

ಪುಟ್ಟಮಕ್ಕಳೇ !

ನಿಮ್ಮ ಅಜ್ಜ ಅಜ್ಜಂದಿರು ನಿಮಗೆ ಕತೆಗಳನ್ನು ಹೇಳಿರಬಹುದಲ್ಲವೆ! ಅವುಗಳನ್ನು ನೆನೆಸಿಕೊಂಡು ನನಗೆ ಬರೆದು ಕಳಿಸುವಿರಾ? ಸೂಚನೆಗಳನ್ನು ಓದಿ ನೋಡಿರಿ.

—ಚಂದಮಾಮ.




Controlling Editor : SRI CHAKRAPANI

Printed and Published by B. NAGI REDDI at the B. N. K. Press Madras -



Chandamama, November, '49

Photo by B. Ranganadham

ದೀಪಸ್ತಂಭ

CHANDAMAMA (Kannada)  November 1949  Regd. No. M. 5210




ಬಿಳಿಯ ಹಂಸ